# ವೇದ-ವೇದಾಂಗ

ಒಂದು ಸ್ಥೂಲ ಪರಿಚಯ

ಡಾ। ಡಿ.ವಿ.ಜಿ



# ವೇದ-ವೇದಾಂತ

## ಒಂದು ಕಿರುಪರಿಚಯ

ಡಿ.ವಿ.ಜಿ.




ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ
ಬೆಂಗಳೂರು

ವೇದ-ವೇದಾಂತ : ಒಂದು ಕಿರುಪರಿಚಯ

ಲೇಖಕರು : ಡಿ.ವಿ.ಜಿ.

ಪ್ರಕಾಶಕರು :
**ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ**
ಬುಲ್ ಟೆಂಪಲ್ ರಸ್ತೆ, ಎನ್. ಆರ್. ಕಾಲೊನಿ
ಬೆಂಗಳೂರು - 560 019

ಮುದ್ರಣ :
**ಶ್ರೀಚಾಮುಂಡೇಶ್ವರಿ ಪ್ರಿಂಟರ್ಸ್**
ಬೆಂಗಳೂರು-560 050



**'Veda-Vedanta : Ondu Kiruparichaya'** ('Vedas and Vedanta : A Brief Introduction'). Kannada. By D.V.G. (D.V. Gundappa). Published by Gokhale Institute of Public Affairs, Bull Temple Road, N. R. Colony, Bangalore -560 019. Pages : xvi + 80.

First published : March 2004

Price: Rs. 50.00

Cover Design by :
K. Chandranatha Acharya

Printed at

Sri Chamundeshwari Printers
Bangalore - 560 050
Ph 2669 6388, 2679 1827

# ಪ್ರಕಾಶಕರ ನುಡಿ

ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ ಸಂಸ್ಥಾಪಕರೂ ಇಪ್ಪತ್ತನೆಯ ಶತಾಬ್ದದಲ್ಲಿ ಭಾರತವು ಕಂಡ ಮಹನೀಯರಲ್ಲಿ ಸಮುನ್ನತರೂ ಆದ ಧೀಮಂತ ರಾಷ್ಟ್ರಕ ಡಿ.ವಿ.ಜಿ.ಯವರನ್ನು ತಿಳಿಯದ ಕನ್ನಡಿಗರಾರು? ಅವರ ಬದುಕು-ಬರೆಹಗಳ ಬೆಳಕಿನಲ್ಲಿ ಯಾರೂ ಸಹ ತಮ್ಮ ಜೀವನವನ್ನು ಹಸನಾಗಿಸಿಕೊಳ್ಳಬಲ್ಲಂಥ ಸತ್ತ್ವವು ಸಮೃದ್ಧವಾಗಿದೆ. ಅಷ್ಟೇ ಅಲ್ಲ, ಜೀವನಮಾಧುರ್ಯ ಮತ್ತು ಸೌಂದರ್ಯಗಳನ್ನು ತುಂಬಿಕೊಳ್ಳಲೂ ಗುಂಡಪ್ಪನವರ ಅಮರಕೃತಿಗಳು ಅನಿವಾರ್ಯಸಾಧನಗಳೆನಿಸಿವೆ. ಇಂಥ ಮಹನೀಯರ ಕೆಲವು ಕೃತಿಗಳು ಅವರ ಅವಸಾನದ ಬಳಿಕವೂ ಇದಂಪ್ರಥಮವಾಗಿ ಬೆಳಕು ಕಾಣುತ್ತಿವೆ. ಅಂಥ ಗ್ರಂಥಗಳಲ್ಲೊಂದು ಪ್ರಕೃತದ 'ವೇದ-ವೇದಾಂತ : ಒಂದು ಕಿರುಪರಿಚಯ'.

ಡಿ.ವಿ.ಜಿ.ಯವರು ತುಂಬ ಹಿಂದೆಯೇ ಟಿಪ್ಪಣಿಗಳ ರೂಪದಲ್ಲಿ ಹಾಗೂ ಕೆಲವೊಂದಿಷ್ಟು ವಿವರಗಳೊಂದಿಗೆ ಬರೆದಿಟ್ಟಿದ್ದ ಈ ಹೊತ್ತಿಗೆಯನ್ನು ಅವರಿಗೆ ತುಂಬ ಪ್ರೀತಿಗೌರವಪಾತ್ರರೂ ನಾಡಿನ ಹೆಸರಾಂತ ವಿದ್ವದ್ವರೇಣ್ಯರೂ ಆದ ಮಹಾಮಹೋಪಾಧ್ಯಾಯ ವಿದ್ವಾನ್ ಎನ್. ರಂಗನಾಥಶರ್ಮಾ ಅವರು ನಮ್ಮ ಪ್ರಾರ್ಥನೆಯನ್ನು ಅಂಗೀಕರಿಸಿ, ನಮ್ಮ ಸಂಸ್ಥೆಯ ಮೇಲಣ ವಿಶ್ವಾಸದಿಂದ ತುಂಬ ಸೊಗಸಾಗಿ ಸಂಪಾದಿಸಿಕೊಟ್ಟಿದ್ದಾರೆ. ಅಷ್ಟೇ ಅಲ್ಲ, ಈ ಕೃತಿಗೆ ಅನುಬಂಧರೂಪದಲ್ಲಿ ಉಪನಿಷತ್ತುಗಳ ಪರಿಚಯವನ್ನೂ ಬರೆದುಕೊಟ್ಟಿದ್ದಾರೆ. ವಯೋವೃದ್ಧರೂ ಜ್ಞಾನವೃದ್ಧರೂ ಆದ ವಿದ್ವಾನ್ ರಂಗನಾಥಶರ್ಮಾ ಅವರ ಈ ಮಹೋಪಕಾರಕ್ಕೆ ನಮ್ಮ ಸಂಸ್ಥೆಯು ತನ್ನ ಹಾರ್ದಿಕ ಕೃತಜ್ಞತೆಯನ್ನು ಅರ್ಪಿಸುತ್ತದೆ. ಅಂತೆಯೇ ಈ ಕೆಲಸದಲ್ಲಿ ನೆರವು ನೀಡಿದ ಶ್ರೀ ಕೆ. ಪಿ. ರಾಜಗೋಪಾಲ್ ಅವರಿಗೂ ನಮ್ಮ ಧನ್ಯವಾದಗಳು.

ಇಡಿಯ ಹಸ್ತಪ್ರತಿಯನ್ನು ಅವಲೋಕಿಸಿ ಕೆಲವೊಂದು ಸೂಚನೆಗಳನ್ನಿತ್ತ ಉಡುಪಿಯ ವಿದ್ವಾಂಸರಾದ ಡಾ|| ಪಾದೇಕಲ್ಲು ವಿಷ್ಣುಭಟ್ಟರಿಗೂ ನಮ್ಮ ನಮನಗಳು. ಅಂತೆಯೇ ಈ ಕೃತಿಯನ್ನು ಆದ್ಯಂತ ಪರಿಶೀಲಿಸಿ, ಕರಡಚ್ಚು ತಿದ್ದಿ, ಇದಕ್ಕೊಂದು ಪ್ರಸ್ತಾವನೆಯನ್ನೂ ಬರೆದಿತ್ತ ಶತಾವಧಾನಿ ಡಾ|| ಆರ್. ಗಣೇಶ್ ಅವರಿಗೆ ನಮ್ಮ ಕೃತಜ್ಞತೆಗಳು. ಎಲ್ಲಕ್ಕಿಂತ ಮಿಗಿಲಾಗಿ ಸಮಗ್ರಕೃತಿಯನ್ನು ಮುದ್ರಣ-ವಿನ್ಯಾಸ-ಕರಡಚ್ಚಿನ ಪರಿಶುದ್ಧಿ ಮುಂತಾದ ಎಲ್ಲ ದೃಷ್ಟಿಗಳಿಂದಲೂ ಪರಾಮರ್ಶಿಸಿ ಬೆಲೆಯುಳ್ಳ ಸಲಹೆಗಳನ್ನು ನೀಡಿದ ಹಿರಿಯರಾದ

ಶ್ರೀ ಎಸ್. ಆರ್. ರಾಮಸ್ವಾಮಿಯವರಿಗೆ ನಮ್ಮ ಅನಂತ ವಂದನೆಗಳು. ಇವರು ಡಿ.ವಿ.ಜಿ.ಯವರ ಆಪ್ತವಲಯದ ವಿದ್ವಾಂಸರಲ್ಲದೆ ಅವರ ಅನೇಕ ಕೃತಿಗಳಿಗೆ ಬರೆವಣಿಗೆಯ ಹಂತದಿಂದ ಮುದ್ರಣದವರೆಗೆ ಆದ್ಯಂತ ಸಹಕಾರಿಗಳಾಗಿದ್ದು ದುಡಿದವರು, ಅವರ ಮೆಚ್ಚುಗೆ ಗಳಿಸಿದವರು. ಈ ಎಲ್ಲ ಮಹನೀಯರೂ ಡಿ.ವಿ.ಜಿ.ಯವರಲ್ಲಿರಿಸಿದ ಭಕ್ತಿಗೌರವಗಳ ಪರಿಣಾಮವಾಗಿ ತುಂಬ ಸುಂದರವಾಗಿ ಸಂಪನ್ನಗೊಂಡಿರುವ ಪ್ರಕೃತಗ್ರಂಥವನ್ನು ಜನತೆಗೆ ಅರ್ಪಿಸುವಲ್ಲಿ ನಮಗೆ ತುಂಬ ಹರ್ಷವಿದೆ.

ಈ ಪುಸ್ತಕದ ಅಕ್ಷರಸಂಯೋಜನೆ ಹಾಗೂ ಮುದ್ರಣವನ್ನು ಅಚ್ಚುಕಟ್ಟಾಗಿ ಮಾಡಿಕೊಟ್ಟ ಶ್ರೀಚಾಮುಂಡೇಶ್ವರಿ ಮುದ್ರಣಾಲಯದವರಿಗೂ ನಮ್ಮ ಧನ್ಯವಾದ ಗಳು. ಅಂತೆಯೇ ರಕ್ಷಾಪುಟದ ವಿನ್ಯಾಸ ಮಾಡಿಕೊಟ್ಟ ಪ್ರಸಿದ್ಧ ಕಲಾವಿದ ಶ್ರೀ ಕೆ. ಚಂದ್ರನಾಥ ಆಚಾರ್ಯ ಅವರಿಗೂ ನಮ್ಮ ವಂದನೆಗಳು.

ಎಲ್ಲಕ್ಕಿಂತ ಮಿಗಿಲಾಗಿ ಡಿ.ವಿ.ಜಿ.ಯವರ ಬಗೆಗೆ ನಿರಂತರ ಪ್ರೀತಿಗೌರವಗಳನ್ನು ಉಳಿಸಿಕೊಂಡುಬಂದು ಅವರ ಬರವಣಿಗೆಯನ್ನು ಸದಾ ಜೀವಂತಗೊಳಿಸಿರುವ ಕನ್ನಡನಾಡಿನ ಪ್ರಜ್ಞಾವಂತ ಪಾಠಕರಿಗೆ ಈ ಕೃತಿಯನ್ನು ನಿವೇದಿಸುವಲ್ಲಿ ನಮಗೆ ಹೆಚ್ಚಿನ ಧನ್ಯತೆಯಿದೆ.

ಬೆಂಗಳೂರು — ಪ್ರಕಾಶಕರು

17 ಮಾರ್ಚ್ 2004

॥ ಶ್ರೀಃ ॥

# ನುಡಿದೋರಣ

## I

ಕೇವಲ ಹೊಸಗನ್ನಡಸಾಹಿತ್ಯಲೋಕವಷ್ಟೇ ಅಲ್ಲ, ನವೋದಿತವಾದ ಕನ್ನಡ ಸಂಸ್ಕೃತಿಯು ಕೂಡ ಕಂಡ ಋಷಿಗಳಲ್ಲೊಬ್ಬರು ಮಹನೀಯರಾದ ಡಿ. ವಿ. ಗುಂಡಪ್ಪ ನವರೆಂದರೆ ಅತಿಶಯದ ಮಾತಾಗದು. ತಮ್ಮ ಬಿರುಕಿಲ್ಲದ ಬದುಕು-ಬರೆಹಗಳ ಮೂಲಕ ಅವರು ಜನತೆಗೆ ನೀಡಿದ ಬೋಧ-ಮೋದಗಳು ಅಷ್ಟಿಷ್ಟಲ್ಲ. ಡಿ.ವಿ.ಜಿ. ಅವರ ಜೀವಿತಾವಧಿಯಲ್ಲಿಯೇ ಪ್ರಕಟವಾಗಿದ್ದ ಅವರ ಕೃತಿಗಳ ಸಾಲಿಗೆ ಮರಣೋತ್ತರ ವಾಗಿ ಪುಸ್ತಕರೂಪದಲ್ಲಿ ಪ್ರಕಾಶಿತವಾದ ಸಂಕೀರ್ಣ ಸ್ಮೃತಿಸಂಪುಟ (ಜ್ಞಾಪಕ ಚಿತ್ರಶಾಲೆಯ ಎಂಟನೆಯ ಭಾಗ), ಮರುಳಮುನಿಯನ ಕಗ್ಗ, ಡಿ.ವಿ.ಜಿ. ಅವರ ಬಿಡಿಬರೆಹಗಳು ಹಾಗೂ ಮುನ್ನುಡಿಗಳೇ ಮುಂತಾದ ಕನ್ನಡದ ಬರೆವಣಿಗೆಗಳಲ್ಲದೆ Human Values in the Code of Manu ನಂಥ ಇಂಗ್ಲಿಷ್ ಹೊತ್ತಿಗೆ ಸಹ ಸೇರುತ್ತವೆ. ಹೀಗಾಗಿ ಡಿ.ವಿ.ಜಿ.ಯವರ ಅನೇಕ ಗ್ರಂಥಗಳು ಪುನರ್ಮುದ್ರಿತ ವಾಗುತ್ತಿರುವಂತೆಯೇ ಆಗೀಗ ಅವರ ಹಚ್ಚಹೊಸ ಬರೆಹಗಳೂ ಬೆಳಕು ಕಾಣುತ್ತಿರು ವುದು ನಮ್ಮೆಲ್ಲರ ಸುಯೋಗ. ಇಷ್ಟಾಗಿಯೂ ಗುಂಡಪ್ಪನವರ ಮತ್ತೆಷ್ಟೋ ಬರೆವಣಿಗೆಯು ಪುಸ್ತಕರೂಪದಲ್ಲಿ ಬಂದಿಲ್ಲವೆಂಬುದು ತುಂಬ ವಿಷಾದದ ಸಂಗತಿ.

ವಿಶೇಷತಃ ಆರೇಳು ದಶಕಗಳ ಕಾಲ ಹಬ್ಬಿದ್ದ ಡಿ.ವಿ.ಜಿ.ಯವರ ಪತ್ರಿಕೋದ್ಯಮ ಸಂಬಂಧಿತವಾದ ಇಂಗ್ಲಿಷ್ ಸಾಹಿತ್ಯವೇ ಸುಮಾರು ಎರಡು ಮೂರು ಸಾವಿರ ಪುಟ ಗಳಷ್ಟಿದೆ. ಇದಲ್ಲದೆ ರಾಜ್ಯಶಾಸ್ತ್ರಕ್ಕೂ ಸಾರ್ವಜನಿಕಜೀವನಕ್ಕೂ ಸಂಬಂಧಿಸಿದಂತೆ ನಾನಾಪತ್ರಿಕೆಗಳಲ್ಲಿ, ಪುಸ್ತಿಕೆ-ಕರಪತ್ರಗಳಲ್ಲಿ ಹಾಗೂ ವರದಿ-ಮನವಿಗಳ ರೂಪದಲ್ಲಿ ಚದುರಿಹೋಗಿರುವ ಮತ್ತೂ ಹೆಚ್ಚಿನ ಆಂಗ್ಲಲೇಖನ ಸಾಮಗ್ರಿಯಿದೆ. ಇವುಗಳೊಟ್ಟಿಗೆ ಸಾಹಿತ್ಯ, ಸಂಸ್ಕೃತಿ, ಕಲೆ, ದರ್ಶನ, ವ್ಯಕ್ತಿಚಿತ್ರ ಮುಂತಾದ ಎಷ್ಟೋ ಸ್ವಾರಸ್ಯಕರವೂ ಮಹತ್ತ್ವದ್ದೂ ಆದ ಸಂಗತಿಗಳಿಗೆ ಸಂಬಂಧಿಸಿದಂಥ ಅನೇಕ ಲೇಖನಗಳ ರಾಶಿಯೂ ಉಂಟು. ಜೊತೆಗೆ ಡಿ.ವಿ.ಜಿ.ಯವರು ತಮ್ಮ ಜೀವನದುದ್ದಕ್ಕೂ ಅನೇಕ ಸಾಹಿತಿಗಳಿಗೆ, ಗೆಳೆಯರಿಗೆ, ವಿದ್ವಾಂಸರಿಗೆ, ಸಮಾಜಸೇವಕರಿಗೆ, ರಾಜನೀತಿ ಕೋವಿದರಿಗೆ, ಸಾರ್ವಜನಿಕ ಹಿತಾಸಕ್ತಿಗಳನ್ನುದ್ದೇಶಿಸಿ ಪತ್ರಿಕೆಗಳಿಗೆ ಬರೆದ ಅಕ್ಷರಶಃ ಸಾವಿರಾರು ಪತ್ರಗಳಿವೆ. ಈ ಎಲ್ಲ ಸಾಮಗ್ರಿಯೂ ಸೇರಿದರೆ ಪ್ರಾಯಶಃ ಈಗ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವರು ಪ್ರಕಟಿಸಿದ ಡಿ.ವಿ.ಜಿ. ಕೃತಿಶ್ರೇಣಿಯ ಹನ್ನೊಂದು

ಸಂಪುಟಗಳಿಗೆ ಅನುಬಂಧರೂಪದಲ್ಲಿ ಸೇರ್ಪಡೆಯಾಗಬಹುದಾದ ನಾಲ್ಕೈದು ಸಂಪುಟಗಳಷ್ಟು ಮುದ್ರಿತಸಾಹಿತ್ಯವಾದೀತು. ಈ ಎಲ್ಲ ಬರೆವಣಿಗೆಯ ಸಂಪಾದನ ಮತ್ತು ಪ್ರಕಟನ ಕಾರ್ಯಗಳು ಸುಲಭವೇನಲ್ಲ. ಈ ಸಾಹಸಕ್ಕೆ ಸಾಕಷ್ಟು ಕಾಲ, ತಾಳ್ಮೆ, ವಿದ್ವತ್ತೆ, ಅನ್ವೇಷಣೆ ಮತ್ತು ಸಂಪನ್ಮೂಲಗಳ ಆವಶ್ಯಕತೆಯಿದೆ. ಆದರೆ ಇದು ದಿಟವಾಗಿ ನಾಡು-ನುಡಿಗಳಿಗೆ ಸಲ್ಲಿಸಿದ ಸೇವೆಯಾಗುತ್ತದೆ. ಇದಕ್ಕೆ ಕೈಹಾಕಬಲ್ಲವರಿಗೆ ಮುಖ್ಯವಾಗಿ ರಾಜ್ಯಶಾಸ್ತ್ರ, ಪತ್ರಿಕೋದ್ಯಮ, ಇಂಗ್ಲಿಷ್ ಭಾಷಾಪ್ರೌಢಿಮೆ, ಅನ್ವೇಷಕ ಬುದ್ಧಿ ಹಾಗೂ ಸಂಶೋಧನಪ್ರಜ್ಞೆಗಳು ಅತ್ಯಾವಶ್ಯಕ. ಈ ಕೆಲಸವು ಬೇಗ ಕೈಗೂಡಲೆಂದು ಆಶಿಸುವೆ.

ಡಿ.ವಿ.ಜಿ.ಯವರ ಇಂಥ ಅಪ್ರಕಟಿತ ಲೇಖನಗಳ ಪೈಕಿ ಪ್ರಕೃತ ಪುಸ್ತಿಕೆಯೂ ಒಂದಾಗಿದೆ. ಈ ಪುಸ್ತಿಕೆಯ ಬಗೆಗೆ ತುಂಬ ಹಿಂದೆಯೇ ದಿವಂಗತ ಡಿ. ಆರ್. ವೆಂಕಟರಮಣನ್ ಅವರೂ ಮಹಾಮಹೋಪಾಧ್ಯಾಯ ವಿದ್ವಾನ್ ಎನ್. ರಂಗನಾಥಶರ್ಮರೂ ನನಗೆ ಹೇಳಿದ್ದರು. ರೋಮ್‌ಸಾಮ್ರಾಜ್ಯದ ಉಚ್ಛ್ರಾಯ ಕಾಲದಲ್ಲಿದ್ದ ತತ್ತ್ವಚಿಂತಕ ಲ್ಯುಕ್ರೀಷಿಯಸ್ಸನ ಬಗೆಗೆ ಇಂಥದ್ದೇ ಬರೆವಣಿಗೆಯನ್ನು ಡಿ.ವಿ.ಜಿ. ಮಾಡಿದ್ದರೆಂದೂ ಪೂಜ್ಯರಾದ ರಂಗನಾಥಶರ್ಮರು ನನಗೆ ಹೇಳಿದ್ದುಂಟು. ಆದರೆ ಅದು ಪ್ರಕೃತ ಏನಾಗಿದೆಯೆಂಬುದನ್ನು ನಾನರಿಯೆ. ಇಂಥ ಇನ್ನೂ ಹಲವಾರು ಬರೆಹಗಳು — ಕನ್ನಡದಲ್ಲಿಯೇ ಬರೆದಂಥವು — ಮತ್ತೂ ಇವೆಯೋ ಏನೋ? ಏಕೆಂದರೆ ಡಿ.ವಿ.ಜಿ.ಯವರು ಪ್ರಕಟನೆಗಾಗಿ ಎಂದೂ ಹಾತೊರೆದವರಲ್ಲ. ೧೯೨೫ರಲ್ಲಿ ಅವರು ಬರೆದಿಟ್ಟ 'ಪರಶುರಾಮ' ನಾಟಕವು ಸುಮಾರು ಐವತ್ತು ವರ್ಷಗಳೇ ಉರುಳಿದ ಬಳಿಕ (೧೯೭೪) ಪ್ರಕಟವಾಯಿತೆಂಬ ಸಂಗತಿಯನ್ನು ನೆನೆದರೆ ಈ ಅಂಶ ಮತ್ತೂ ಸ್ಪಷ್ಟವಾದೀತು. ಇರಲಿ, ಸದ್ಯದ ಕಿರುಹೊತ್ತಿಗೆಯ ಬಗೆಗೆ ಸ್ವಲ್ಪ ಗಮನಿಸೋಣ.

## II

ಡಿ.ವಿ.ಜಿ.ಯವರು ತಮ್ಮ ಸಾಹಿತ್ಯಜೀವನದ ಆರಂಭದಿಂದ ಮಾತ್ರವಲ್ಲ, ಜಾಗೃತಜೀವನದ ಅರುಣೋದಯಾವಧಿಯಿಂದ ಮೊದಲ್ಗೊಂಡು ಭಾರತೀಯ ಸಂಸ್ಕೃತಿಯ ಬಹುಮುಖಿಯೂ ಬ್ರಹ್ಮೈಕಮೂಲಿಯೂ ಆದ ರೂಪ-ಸ್ವರೂಪಗಳನ್ನು ಕುರಿತು ಗಂಭೀರವಾಗಿ ಚಿಂತಿಸುತ್ತ ಬೆಳೆದವರಷ್ಟೆ. ಈ ಚಿಂತನಕ್ರಮವು ಅವರ ಬದುಕಿನ ಕಡೆಯವರೆಗೂ ಅವ್ಯಾಹತವಾಗಿ ನಡೆದಿತ್ತು. ತಮ್ಮ ಜೀವನಸಂಧ್ಯಾಕಾಲ ದಲ್ಲಿ ಕೂಡ ಅವರು ದೇವರು, ಧರ್ಮ, ಋತ, ಸತ್ಯ, ವೇದ, ವೇದಾಂತ, ರಸ,

ಕಾವ್ಯ, ಸಂಸ್ಕೃತಿ, ಸಮಾಜ ಮುಂತಾದ ಮೂಲಭೂತ ಸಂಗತಿಗಳನ್ನು ಕುರಿತು ಆಳವಾಗಿ ಧ್ಯಾನಿಸುತ್ತಿದ್ದುದಕ್ಕೆ ನಿದರ್ಶನವಾಗಿ ದೇವರು, ಋತ-ಸತ್ಯ-ಧರ್ಮ, ಸಂಸ್ಕೃತಿ (ಪರಿಷ್ಕೃತಾವೃತ್ತಿ), ಕಾವ್ಯಸ್ವಾರಸ್ಯ, ರಾಜ್ಯಕುಟುಂಬ ಮೊದಲಾದ ಬರೆಹಗಳೇ ಸಾಕ್ಷಿ. ಹೀಗೆ ಸ್ವಬೋಧಶುದ್ಧಿಯನ್ನು ಮನದಟ್ಟು ಮಾಡಿಕೊಳ್ಳಲೂ ಜನಪದಬೋಧೆಯ ಮೂಲಕ ಲೋಕಸಂಗ್ರಹವನ್ನು ಸಾಧಿಸಲೂ ಸಚ್ಚಿಂತನೆಯ ದ್ವಾರಾ ಶಾಸ್ತ್ರ-ವಿಚಾರಗಳ ಪರಿಧಿಯನ್ನು ಹೆಚ್ಚಿಸಿ ಆರ್ಷಋಣವನ್ನು ತೀರಿಸಲೂ ಸಂಕಲ್ಪಿಸಿದ ಗುಂಡಪ್ಪನವರಿಗೆ ಪ್ರಕೃತಪುಸ್ತಿಕೆಯನ್ನು ಬರೆಯುವುದೊಂದು ಬಾಹ್ಯಾ-ಭ್ಯಂತರಾನಿವಾರ್ಯತೆಯಾಗಿತ್ತೆಂದರೆ ಅತಿಶಯವಲ್ಲ. ಆದುದರಿಂದಲೇ ಅವರ ಬರೆವಣಿಗೆಗಳಿಗೆ ಎಲ್ಲಿಲ್ಲದ ಕಾಂತಿ-ಶಾಂತಿಗಳೂ ಹುರುಳು-ಹೊಸತನಗಳೂ ಬಂದಿವೆ. ಸದ್ಯದ ಕೃತಿಯು ಆಕೃತಿಯಲ್ಲಿ ಕಿರಿದಾದರೂ ಆಂತರ್ಯದಲ್ಲಿ ಹಿರಿದಾದುದು, ಆಶಯದಲ್ಲಿ ಮಿಗಿಲಾದುದು. ಇಲ್ಲಿ ಭಾರತೀಯಸಂಸ್ಕೃತಿಯ ಜೀವಾಳವೆನಿಸಿದ ವೇದ-ವೇದಾಂತಗಳ ತತ್ತ್ವವನ್ನು ಕುರಿತು ಮೌಲಿಕವಿವೇಚನೆಯಿದೆ. ಈ ದಿಶೆಯಲ್ಲಿ ಗುಂಡಪ್ಪನವರ ಕಾಳಜಿ ನಿತಾಂತವಾಗಿತ್ತು.

ಈಚೆಗೆ ಯಜಮಾನಸಂಸ್ಕೃತಿ, ಉಪಸಂಸ್ಕೃತಿ, ಪ್ರತಿಸಂಸ್ಕೃತಿ ಮುಂತಾದ ವ್ಯಾವಹಾರಿಕತಾಮೂಲದ ವ್ಯಧಿಕರಣಾಧ್ಯಯನಪ್ರವೃತ್ತಿಗಳು ಉದಿಸಿದ ಬಳಿಕ ವೇದ ವಾಙ್ಮಯವನ್ನೂ ಅದು ಪ್ರತಿನಿಧಿಸುವ ಸಂಸ್ಕೃತಿಯನ್ನೂ ಅನುಮಾನದಿಂದ ಕಾಣುವ, ಅವಜ್ಞೆಯಿಂದಲೂ ನೋಡುವ ವರ್ತನೆ ಬೆಳೆದಿದೆ. ಅಷ್ಟೇ ಅಲ್ಲ, ಅದು ದಿಟವಾಗಿ ಭಾರತೀಯಸಂಸ್ಕೃತಿಯ ಹೃದಯವೇ ಅಲ್ಲವೆಂದೂ ಒಂದು ವೇಳೆ ಅದಕ್ಕೇನಾದರೂ ಅಷ್ಟಿಷ್ಟರಮಟ್ಟಿಗೆ ಮಹತ್ತ್ವವಿದ್ದಲ್ಲಿ ಆ ಭಾಗಗಳೆಲ್ಲ ಪರಾಯತ್ತವೆಂದೂ, ಹೆಚ್ಚೇನು, ಭಾರತೀಯಜೀವನದ ಕರಾಳಮುಖವೇ ವಿಕೃತಚರಿತವೇ ವೇದಸಂಸ್ಕೃತಿಯೆಂದೂ ಕೆಲವರು ಅಪಲಪಿಸುತ್ತ ಬಂದಿದ್ದಾರೆ. ಇಂಥವರ ಸಂಖ್ಯೆ ತೀರ ಸ್ವಲ್ಪವೇ ಆದರೂ ಇವರಲ್ಲನೇಕರು ಇಂದಿನ ಪ್ರಭುತ್ವಪೋಷಿತ ಸಂಶೋಧನ-ಸಾಂಸ್ಕೃತಿಕ ಸಂಸ್ಥೆಗಳಲ್ಲಿಯೂ ವಿದ್ಯಾಕೇಂದ್ರಗಳಲ್ಲಿಯೂ ಪತ್ರಿಕೋದ್ಯಮ ಹಾಗೂ ಸಾಹಿತ್ಯವಲಯಗಳಲ್ಲಿಯೂ ಲಬ್ಧಪ್ರತಿಷ್ಠರಾಗಿರುವ ಕಾರಣ ಅವರ ಅಭಿಪ್ರಾಯಗಳೇ ಸಮಗ್ರ ಜನತೆಯ ಅಭಿಮತವೆಂದೂ ಅವರ ಅನಿಸಿಕೆಗಳೇ ಅಪ್ರತಿಹತಸಿದ್ಧಾಂತಗಳೆಂದೂ ಭ್ರಮೆಯಾಗುವ ಮಟ್ಟಿಗೆ ಪ್ರಚಾರ ಸಾಗಿದೆ, ಕೋಲಾಹಲ ಹಬ್ಬಿದೆ. ಆದರೆ ಇದು ವಾಸ್ತವವಲ್ಲ. ಇಂದಿಗೂ ವೇದತತ್ತ್ವದಲ್ಲಿ ಶ್ರದ್ಧೆಯಿರಿಸಿರುವ ಸನಾತನಧರ್ಮಾಭಿಮಾನಿಗಳೇ ಹೆಚ್ಚಿದ್ದಾರೆ. ಮಾತ್ರವಲ್ಲ, ಇಂಥ ಶ್ರದ್ಧೆಯು ಅವಿಚಾರಿತವಲ್ಲ, ಕುರುಡುನಂಬುಗೆಯಲ್ಲ, ಸ್ವಾತಿಶಯದ ಕಲ್ಪನಾಜಲ್ಪನಗಳಂತೂ ಅಲ್ಲವೇ ಅಲ್ಲವೆಂದು

ಸಾಬೀತುಮಾಡುವಂತೆ ಸಾವಿರಾರು ಮಂದಿ ಸಾಂಪ್ರದಾಯಿಕ ಹಾಗೂ ನವೀನ ವ್ಯಾಸಂಗಪರಿಣತರಾದ ವಿದ್ವಾಂಸರ, ಸಂಶೋಧಕರ ಕ್ಷೋದಕ್ಷಮವೂ ತಲ ಸ್ಪರ್ಶಿಯೂ ಆದ ವೇದವಾಙ್ಮಯದ ಮಹತ್ತ್ವ-ರಹಸ್ಯ-ಸ್ವಾರಸ್ಯವಿವೃತಿಗಳೂ ವಿಪುಲ ವಾಗಿ ಬಂದಿವೆ, ಬರುತ್ತಿವೆ ಕೂಡ. ಆದರೆ ಇಂಥವುಗಳಿಗೆ ವೇದಭೂಮಿಯೆನಿಸಿದ ಭಾರತದೇಶದಲ್ಲಿಯೇ ಪ್ರಚಾರ ಹಾಗೂ ಪ್ರಭುತ್ವದ ಆದರವು ತಗ್ಗಿರುವುದೊಂದು ವಿಪರ್ಯಾಸ, ವಿಷಾದಗಾಥೆ. ಹೀಗಾಗಿ ವೇದವಾಙ್ಮಯ ಹಾಗೂ ತತ್ಪ್ರತಿನಿಧಿಕ ಸಂಸ್ಕೃತಿಯ ಬಗೆಗೆ ಎಷ್ಟೋ ಮಂದಿ 'ಸಾಮಾನ್ಯ'ರಿಗೆ ಶ್ರದ್ಧೆಯಿದ್ದರೂ ಅರಿವಿಲ್ಲ. ಇನ್ನೆಷ್ಟೋ ಮಂದಿ 'ವಿದ್ವಾಂಸ'ರಿಗೆ ಜಾಣ್ಮೆಯಿದ್ದರೂ ಕಾಣ್ಕೆಯಿಲ್ಲ, ಶಬ್ದಜ್ಞಾನ ವಿದ್ದರೂ ಅರ್ಥಾನುಸಂಧಾನವಿಲ್ಲ. ಹೆಚ್ಚೇನು, ಅನರ್ಥಾನುಶೀಲನವೇ ಸಾಗಿದೆ. ಇಂಥ ಎಲ್ಲ ಬಗೆಯ ಕೊರತೆಗಳಿಗೂ ಪ್ರಾಮಾಣಿಕವೂ ಪ್ರಗಲ್ಭವೂ ಆದ ವೇದಹೃದಯಾನುಸಂಧಾನವೇ ಏಕೈಕಪರಿಹಾರ. ಈ ನಿಟ್ಟಿನಲ್ಲಿ ಡಿ.ವಿ.ಜಿ.ಯವರ ಬರೆಹ ತುಂಬ ಒಳ್ಳೆಯ ಪ್ರವೇಶಿಕೆ. ಇದು ಬರಿಯ ಪ್ರವೇಶಿಕೆಯಷ್ಟೇ ಅಲ್ಲ, ಸುಭಗಸಮರ್ಥಪ್ರದೀಪಿಕೆಯೂ ಹೌದು*.

ವೇದಸಾಹಿತ್ಯ-ಸಂಸ್ಕೃತಿಗಳ ಬಗೆಗೆ ಎಷ್ಟೆಷ್ಟೋ ಜನರಿಗೆ ಇಲ್ಲದ ಸಲ್ಲದ ಅನುಮಾನಗಳಿವೆ, ಅಂಧಶ್ರದ್ಧೆಗಳೂ ಇವೆ. ನಾಸ್ತಿಕರೂ ಆಸ್ತಿಕರೂ ಅದೆಷ್ಟೋ ಬಾರಿ ಸಮಾನವಾಗಿ ಅಜ್ಞಾನದಲ್ಲಿ ಮುಳುಗಿರುತ್ತಾರೆ. ಇಂಥವರೆಲ್ಲ ಮೊದಲು ಡಿ.ವಿ.ಜಿ. ಯವರ ಈ ಕಿರುಹೊತ್ತಿಗೆಯನ್ನು ಓದಬೇಕು, ಆಸ್ಥೆಯಿಂದ ಓದಬೇಕು. ಇಲ್ಲಿ ವೇದಗಳ 'ವಸ್ತುತಂತ್ರ' ಸ್ವರೂಪದ ಸರಳವಾದರೂ ಸಾರವತ್ತಾದ ವಿವರಣೆಯಿದೆ.

ಸಾಮಾನ್ಯವಾಗಿ ವೇದಗಳ ಕಾಲ, ದೇಶ, ಜನಜೀವನ ಮುಂತಾದವುಗಳ ಬಗೆಗೇ ಸಂಶೋಧಕರ ಕಣ್ಣು ಸುಳಿದಾಡುತ್ತದೆ. ಪಾಮರರಾದರೋ ವೇದಗಳ ಮೂಲಕ 'ಪಡೆದುಕೊಳ್ಳಬಹುದಾದ' ಸಿದ್ಧಿಗಳ ಬಗೆಗೆ, ಸಮೃದ್ಧಿಗಳ ಬಗೆಗೆ ಸದಾ ಮುಗ್ಧರಾಗಿರು ತ್ತಾರೆ. ಹೀಗಾಗಿಯೇ ಶುಷ್ಕತರ್ಕಗಳ ಜಟಿಲತೆಯೂ ಭ್ರಾಮಕ ತಂತ್ರಕರ್ಮಗಳ ಕೋಟಲೆಯೂ ವೇದವಾಙ್ಮಯಕ್ಕೂ ತತ್ಪ್ರತಿಪಾದಿತಸಂಸ್ಕೃತಿಗೂ ಅಂಟುವಂತಾಗಿದೆ. ಆದರೆ ವಸ್ತುತಃ ನಿರ್ವಿಶೇಷಾನುಭವದ (ಅಂದರೆ ಅವಸ್ಥಾತ್ರಯಮೀಮಾಂಸೆಯ) ಮೂಲಕ ಅಧ್ಯಾರೋಪಾಪವಾದಯುಕ್ತಿಯನ್ನೊಳಗೊಂಡ ಪೂರ್ಣತರ್ಕ ಹಾಗೂ ಚಿತ್ತಶುದ್ಧಿ-ಹೃದಯವಿಸ್ತಾರಗಳನ್ನುಂಟುಮಾಡುವ ಇಷ್ಟಾಪೂರ್ತಾತ್ಮಕಕರ್ಮ ಮಾತ್ರ ವೇದೋದ್ದಿಷ್ಟವೆಂದೂ ಇದು ಯಾವುದೇ ತೆರನಾದ ಅವಿವೇಕಗಳಿಂದ, ಜೀವನ ವಿರೋಧಗಳಿಂದ ವಿಮುಕ್ತವೆಂದೂ ತಿಳಿಯಬೇಕಾದ ತುರ್ತು ತುಂಬ ಮುಖ್ಯವಾಗಿದೆ.

---

* ಪ್ರದೀಪಿಕೆಯೆಂದರೆ ದೀಪಗಳನ್ನೆಲ್ಲ ಬೆಳಗಿಸಲೆಂದು ಬಳಸುವ ಪ್ರಧಾನದೀಪವೆಂದರ್ಥ (Keylamp ಅಥವಾ Masterlamp).

ಈ ಕಿರುಹೊತ್ತಿಗೆಯಲ್ಲಿ ಡಿ.ವಿ.ಜಿ.ಯವರು ಮುಖ್ಯವಾಗಿ ವೇದಾಪೌರುಷೇಯತ್ವ, ವೇದಾರ್ಥಸಮಗ್ರತೆ, ವೇದಸಾಹಿತ್ಯದ ವ್ಯಾಪ್ತಿ-ವಿಸ್ತರ, ವೇದಾಂತದ ತತ್ತ್ವಸ್ವರೂಪ, ವೇದಾಂಗಗಳ ನೆಲೆ-ಬೆಲೆ ಮುಂತಾದವುಗಳನ್ನು ವಿವೇಕಿಗಳೂ ಶ್ರದ್ಧಾವಂತರೂ ಆದ ಸಹೃದಯರು ಒಪ್ಪುವಂತೆ, ಆದರಿಸುವಂತೆ ಚಿತ್ರಿಸಿದ್ದಾರೆ. ಈ ಅಂಶಗಳನ್ನೆಲ್ಲ ಇಲ್ಲಿ ಮತ್ತೆ ಅನುವಾದಿಸುವುದೆಂದರೆ ಬಣ್ಣದ ಚಿತ್ರಕ್ಕೆ ಬಟ್ಟೆ ತೊಡಿಸಿದಂತೆ ಅನಪೇಕ್ಷಿತವೇ ಆಗುವುದೆಂದು ತಿಳಿಯುತ್ತೇನೆ. ಈ ಹೊತ್ತಿಗೆಯ ಸಂಪಾದನ-ಪರಿಷ್ಕಾರಬಾಧ್ಯತೆಗಳನ್ನು ಸಂತೋಷದಿಂದ ವಹಿಸಿಕೊಂಡು ತಮ್ಮ ಶ್ರದ್ಧಾಪೂರ್ಣ ಕರ್ತವ್ಯವೆಂಬಂತೆ ನಿರ್ವಹಿಸಿರುವುದಲ್ಲದೆ ಪ್ರಧಾನವಾದ ಉಪನಿಷತ್ತುಗಳ ಸಂಕ್ಷೇಪವಾದರೂ ಸಮಗ್ರವಾಗಬಲ್ಲಂಥ ಪರಿಚಯದ ಅನುಬಂಧವನ್ನೂ ರಚಿಸಿಕೊಟ್ಟಿರುವವರು ವಯೋವೃದ್ಧ-ಜ್ಞಾನವೃದ್ಧ-ವಿದ್ವತ್ಸಹೃದಯರೂ ಆದ ಪೂಜ್ಯ ಶ್ರೀ ರಂಗನಾಥಶರ್ಮರು. ಇವರು ಡಿ.ವಿ.ಜಿ.ಯವರಿಗೆ ಅತ್ಯಂತ ಆತ್ಮೀಯರಾಗಿದ್ದ ವಿದ್ವನ್ಮಿತ್ರರಷ್ಟೇ ಅಲ್ಲ, ಅವರ ಬದುಕು-ಬರೆಹಗಳಲ್ಲಿ ತಲಸ್ಪರ್ಶಿಯಾದ ತಿಳಿವು-ನಲವುಗಳನ್ನು ತಳೆದಿದ್ದು, ಮರುಳಮುನಿಯನ ಕಗ್ಗದಂಥ ಗಂಭೀರಕೃತಿಯನ್ನು ಅದರ ಕರಡು ಹಸ್ತಪ್ರತಿಯ ಕ್ಲಿಷ್ಟದುರೂಹಸ್ಥಿತಿಯಿಂದ ಸರ್ವಸುಲಭಗ್ರಾಹ್ಯವಾಗುವಂತೆ ಸಂಪಾದಿಸಿಕೊಟ್ಟ ಮಹನೀಯರು. ಇಂಥವರ ಕೈಗಳ ಆರೈಕೆ ಪಡೆದು ಹೊರಬಂದಿರುವ ಡಿ.ವಿ.ಜಿ.ಯವರ ಪ್ರಜ್ಞಾಶಿಶುವಾದ ಪ್ರಕೃತಕೃತಿಯು ವಾಮದೇವಮಹರ್ಷಿಯಂತೆ ಸ್ವಯಂಪೂರ್ಣವಾಗಿದೆ. ಈ ಕೃತಿಗೆ ಮೊದಲ ಮಾತಾಗಿ ನಾಲ್ಕು ಸಾಲನ್ನು ಬರೆಯುವ ಯೋಗ್ಯತೆಯನ್ನು ನಾನಂತೂ ಪಡೆದಿಲ್ಲ. ನನ್ನ ಮನೋಬುದ್ಧಿಗಳನ್ನು ರೂಪಿಸಿದ ಲೇಖಕರಲ್ಲಿ ಡಿ.ವಿ.ಜಿ. ಅವರೇ ಆದ್ಯರು. ಇವರ ಬದುಕು-ಬರೆಹಗಳಿಂದಾಗಿಯೇ ನಾನು ಭಾರತೀಯಸಂಸ್ಕೃತಿಯ ಸಾರವನ್ನೂ ಜಗಜ್ಜೀವೇಶ್ವರಯೋಗವನ್ನೂ ತಿಳಿಯುವಂತೆ ಆಯಿತು, ಜೀವನಸೌಂದರ್ಯವನ್ನು ಅನುಭವಿಸುವಂತಾಯಿತು. ಇನ್ನು ವಿದ್ವಾನ್ ಎನ್. ರಂಗನಾಥಶರ್ಮರು ನನಗೆ ತಮ್ಮ ವ್ಯಕ್ತಿತ್ವ-ಕೃತಿತ್ವಗಳ ಮೂಲಕ, ಹೃದ್ಭಾವ-ಚಿದ್ಭಾವಗಳ ಮೂಲಕ ಪೂಜ್ಯಗುರುವರ್ಯರಾಗಿ ಹರಸುತ್ತಿರುವ ಹಿರಿಯರು. ಅಂಥವರ ಲೇಖನ, ಇಂಥವರ ಸಂಪಾದನಗಳನ್ನು ಹೊಂದಿದ ಈ ಕೃತಿಗೆ ಮತ್ತೆ ಮತ್ತೆ ಕೈಯೆತ್ತಿ ವಂದನೆ ಸಲ್ಲಿಸಬಲ್ಲೆನಲ್ಲದೆ ಹೆಚ್ಚನ್ನೇನೂ ಹೇಳಲು ಸಮರ್ಥನಲ್ಲ. ಈ ನಾಲ್ಕು ಮಾತುಗಳ ಮೂಲಕ ಡಿ.ವಿ.ಜಿ.ಯವರ ಹಾಗೂ ರಂಗನಾಥಶರ್ಮರ ನುಡಿಗಳ ಗುಡಿಯಂಗಳದಲ್ಲಿ ತೋರಣ ಕಟ್ಟಲು ಬರುವಂತಾದುದಕ್ಕಾಗಿ ನನ್ನ ಭಾಗ್ಯದೇವತೆಗಳಿಗೆ ನಮನಗಳು.

**“ಮಹಾಪುರುಷಸಂಶ್ರಯಃ ಕಸ್ಯ ನೋನ್ನತಿಕಾರಕಃ?”**

**– ಶತಾವಧಾನಿ ಡಾ|| ಆರ್. ಗಣೇಶ್**

# ನಿವೇದನೆ

ಪೂಜ್ಯ ಶ್ರೀ ಡಾ|| ಡಿ. ವಿ. ಗುಂಡಪ್ಪನವರು ಅಸ್ತಂಗತರಾದ ಮೇಲೆ ಅವರ "ಮರುಳಮುನಿಯನ ಕಗ್ಗ" ಎಂಬ ಗ್ರಂಥವು ಪ್ರಕಟಿತವಾಯಿತು. ಅವರು ಬರೆದಿಟ್ಟಿದ್ದ ಹಸ್ತಪ್ರತಿಗಳ ಕಡತದಲ್ಲಿ ದೊರೆತ ಪದ್ಯಗಳು ಅವು. ಅವೆಲ್ಲವನ್ನೂ ಹುಡುಕಿ ತೆಗೆದು ಕ್ರಮಬದ್ಧವಾಗಿ ಜೋಡಿಸಿ, ಆವಶ್ಯಕವಾದೆಡೆಯಲ್ಲಿ ಪರಿಷ್ಕರಿಸಿ, ಪ್ರಕಟನಾರ್ಹವನ್ನಾಗಿ ಮಾಡಿಕೊಡಬೇಕೆಂದು ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯವರು ಆ ಕಾರ್ಯವನ್ನು ನನಗೆ ವಹಿಸಿದರು. ನಾನು ಸಂತೋಷದಿಂದಲೇ ಅದನ್ನು ಅಂಗೀಕರಿಸಿ ಯಥಾಮತಿಯಾಗಿ ಶೋಧಿಸಿ ಪರಿಷ್ಕರಿಸಿಕೊಟ್ಟೆನು. ಅದು ಪ್ರಕಟವಾಗಿ ವಿಶಿಷ್ಟವಾದ ಜನಪ್ರಿಯತೆಯನ್ನು ಗಳಿಸಿಕೊಂಡಿದೆ. "ಮರುಳ ಮುನಿಯನು ನಾನು ಮಂಕುತಿಮ್ಮನ ತಮ್ಮ" ಎಂದು ಶ್ರೀ ಡಿ.ವಿ.ಜಿ.ಯವರು ಬರೆದಂತೆ ಮಂಕುತಿಮ್ಮನಿಗೆ ಯೋಗ್ಯನಾದ ತಮ್ಮನಾಗಿ, ಆ ಗ್ರಂಥವು ಇದುವರೆಗೆ ಮೂರು ನಾಲ್ಕು ಮುದ್ರಣಗಳನ್ನು ಕಂಡಿದೆ.

ಅದು ಪ್ರಕಟವಾದ ಮೇಲೆ ಶ್ರೀ ಡಿ.ವಿ.ಜಿ.ಯವರ ತಮ್ಮಂದಿರೂ ಈಗ ಸ್ವರ್ಗಸ್ಥರೂ ಆಗಿರುವ ಶ್ರೀ ಡಿ. ವಿ. ರಾಮರಾಯರು ಶ್ರೀ ಡಿ.ವಿ.ಜಿ.ಯವರ ಇನ್ನೊಂದು ಹಸ್ತಲಿಖಿತವಾದ ದೊಡ್ಡ ಕಡತವನ್ನು ನನಗೆ ತಂದುಕೊಟ್ಟು ಅದರಲ್ಲಿ ಪ್ರಕಟನಾರ್ಹವಾದ ಭಾಗವೇನಾದರೂ ಇದೆಯೇ ಎಂಬುದನ್ನು ನೋಡಿಕೊಡ ಬೇಕೆಂದು ತಿಳಿಸಿದರು. ಅನಂತರ ನಾನು ಆ ಕಡತವನ್ನು ಮೂರು ನಾಲ್ಕು ಸಲ ಬಿಚ್ಚಿನೋಡಿದ್ದುಂಟು. ಅದು ಸಾವಧಾನವಾಗಿ ಪರಿಶೀಲಿಸಬೇಕಾದದ್ದಾಗಿತ್ತು. ನನಗೆ ಬೇರೆ ಬೇರೆ ಕಾರ್ಯಭಾರಗಳ ಒತ್ತಡವು ಪ್ರಾಪ್ತವಾದ್ದರಿಂದ ಆ ಕಡತವನ್ನು ಸರಿಯಾಗಿ ಪರಿಶೀಲಿಸಲು ಅವಕಾಶವು ದೊರೆಯಲಿಲ್ಲ. ಅದು ವಿಸ್ಮೃತಪ್ರಾಯವಾದದ್ದೂ ಉಂಟು.

ಹೀಗಿರಲು ಒಮ್ಮೆ ನನ್ನ ಯುವಮಿತ್ರರಾದ ಶ್ರೀಯುತ ಕೆ. ಪಿ. ರಾಜಗೋಪಾಲರು ನಮ್ಮ ಮನೆಗೆ ಬಂದಾಗ ಪ್ರಾಸಂಗಿಕವಾಗಿ ಶ್ರೀ ಡಿ.ವಿ.ಜಿ.ಯವರು ರಚಿಸಿದ ಸಾಹಿತ್ಯಪ್ರಕಾರವು ಪ್ರಸ್ತುತವಾಯಿತು. ಆಗ ನನಗೆ ಶ್ರೀ ಡಿ. ವಿ. ರಾಮರಾಯರು ಕೊಟ್ಟಿದ್ದ ಹಸ್ತಪ್ರತಿಗಳ ಕಡತವು ಸ್ಮರಣೆಗೆ ಬಂದು, ಅದನ್ನು ಹೊರಗೆ ತೆಗೆದು ತೋರಿಸಿದೆ. ಅದರಲ್ಲಿ ಪ್ರಕಟನಾಯೋಗ್ಯವಾದ ಭಾಗವಿದ್ದರೆ ಹುಡುಕಿ ತೆಗೆಯಬೇಕೆಂದೂ ಅವರನ್ನು ಕೇಳಿಕೊಂಡೆ. ಅವರು ಸಂತೋಷದಿಂದ ಒಪ್ಪಿ ಎಲ್ಲ ಕಡತವನ್ನು ತೆಗೆದುಕೊಂಡು ಹೋದರು. ಕೆಲವು ದಿನಗಳಲ್ಲಿ ಅದನ್ನು ಶೋಧಿಸಿ

‘ವೇದ-ವೇದಾಂತ — ಒಂದು ಸಣ್ಣ ಪರಿಚಯ’ ಎಂಬ ಹೆಸರಿನ ಈ ಭಾಗವನ್ನು ಪ್ರಕಟನಾರ್ಹವೆಂದು ಆರಿಸಿ ಸಂಪೂರ್ಣ ಕಡತವನ್ನು ತಂದುಕೊಟ್ಟರು. ಶ್ರೀ ರಾಜಗೋಪಾಲ್ ಅವರಿಂದ ನನಗಾದ ಉಪಕಾರ ದೊಡ್ಡದು.

ಆಗ ನಾನು ಎಚ್ಚೆತ್ತು, ನನ್ನಿಂದಾದ ಕಾಲಹರಣಕ್ಕಾಗಿ ಪಶ್ಚಾತ್ತಾಪಪಡುತ್ತ, ನನ್ನ ಯುವಮಿತ್ರರು ಹುಡುಕಿಕೊಟ್ಟ ಗ್ರಂಥಭಾಗವನ್ನು ಕ್ರಮವಾಗಿ ಓದತೊಡಗಿದೆ. ಬಹುವರ್ಷಗಳ ಹಿಂದೆ ಬರೆದ ಪ್ರತಿಯಾದ್ದರಿಂದ ಕಾಗದವು ಅತ್ಯಂತಶಿಥಿಲವಾಗಿ ಮುಟ್ಟಿದರೆ ಹರಿದುಹೋಗುವ ಸ್ಥಿತಿಯಲ್ಲಿತ್ತು. ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯವರಿಗೆ ಈ ವಿಚಾರವನ್ನು ತಿಳಿಸಿದಾಗ, ಅವರು ಆಸಕ್ತಿಯನ್ನು ವಹಿಸಿ ಈ ಗ್ರಂಥಭಾಗದ ಜೆರಾಕ್ಸ್ ಪ್ರತಿಯನ್ನು ಮಾಡಿಸಿಕೊಟ್ಟರು.

ಇದು ಕ್ರಮಬದ್ಧವಾಗಿ ಬರೆದ ಒಂದು ಗ್ರಂಥವಾಗಿರಲಿಲ್ಲ. ವೇದ ಮತ್ತು ಉಪನಿಷತ್ತುಗಳ ಮೇಲೆ ಡಿ.ವಿ.ಜಿ.ಯವರು ಮಾಡಿದ ಉಪನ್ಯಾಸಗಳ ಸಂಗ್ರಹ ವಿದು. ಅವರು ನರಸಿಂಹರಾಜ ಕಾಲೊನಿಯ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯಲ್ಲಿ ಪ್ರತಿವಾರವೂ ಈ ವಿಷಯದಲ್ಲಿ ಉಪನ್ಯಾಸಗಳನ್ನೀಯುತ್ತಿದ್ದುದು ನನ್ನ ಸ್ಮರಣೆಯಲ್ಲಿದೆ. ಅವರ ಶಿಷ್ಯರೊಬ್ಬರು ಉಪನ್ಯಾಸಗಳನ್ನು ಟೇಪ್‌ರೆಕಾರ್ಡ್ ಮಾಡಿಕೊಳ್ಳುತ್ತಿದ್ದರು. ಅನಂತರ ಟೇಪ್‌ರೆಕಾರ್ಡರಿನಿಂದ ನಕಲು ಮಾಡಿದ ಹಸ್ತಲಿಖಿತಪ್ರತಿ ಇದು. ಉಪನ್ಯಾಸಕಾಲದಲ್ಲಿ ಸಾಂದರ್ಭಿಕವಾಗಿ ಬೇರೊಂದು ವಿಚಾರ ಬರಬಹುದು. ಶ್ರೋತೃಗಳ ಪ್ರಶ್ನೆಗೆ ಉತ್ತರವಾಗಿ ಹಿಂದೆ ಹೇಳಿದ್ದನ್ನೇ ವಿವರಿಸಬೇಕಾಗುವುದುಂಟು. ಈ ಕಾರಣಗಳಿಂದ ಪುನರುಕ್ತಿಯೂ ಆಗಬಹುದು. ಹೇಳಬೇಕೆಂದು ಗುರುತುಮಾಡಿಕೊಂಡದ್ದು ಬಿಟ್ಟೂ ಹೋಗಬಹುದು.

ಈ ಪ್ರಕಾರವಾಗಿ ಕೆಲವು ನ್ಯೂನತೆಗಳು ನನಗೆ ಗೋಚರಿಸಿದವು. ಓದುಗರಿಗೆ ಈ ಪುಸ್ತಕವು ಹೇಗೆನಿಸಬಹುದು — ಎಂಬುದನ್ನು ತಿಳಿಯುವ ಉದ್ದೇಶದಿಂದ ನನ್ನ ಮಾನ್ಯಮಿತ್ರರಾದ ಡಾ॥ ಪಾದೇಕಲ್ಲು ವಿಷ್ಣುಭಟ್ಟರಿಗೆ ಇದನ್ನು ಕೊಟ್ಟು ತಮ್ಮ ಅಭಿಪ್ರಾಯವನ್ನು ತಿಳಿಸುವಂತೆ ಕೇಳಿಕೊಂಡೆನು. ಅವರು ಸಮಗ್ರವಾಗಿ ಹಸ್ತಪ್ರತಿಯನ್ನು ಓದಿ, ತಮಗೆ ಗೋಚರಿಸಿದ ಕೆಲವು ನ್ಯೂನತೆಗಳನ್ನು ಗುರುತಿಸಿ ಕೊಟ್ಟರು, ಅಲ್ಲದೆ ಇದು ಅವಶ್ಯವಾಗಿ ಪ್ರಕಟನೆಗೆ ಅರ್ಹವಾದದ್ದೆಂದೂ ಆ ನ್ಯೂನತೆಗಳ ಪರಿಹಾರಕ್ಕಾಗಿ ವಿಸ್ತಾರವಾದ ಒಂದು ಪ್ರಸ್ತಾವನೆ ಆವಶ್ಯಕವೆಂದೂ ತಿಳಿಸಿದರು. ಈ ಉಪಕಾರಕ್ಕಾಗಿ ನಾನು ಆ ಮಹನೀಯರಿಗೆ ಕೃತಜ್ಞನಾಗಿದ್ದೇನೆ.

ಈ ಗ್ರಂಥಕ್ಕೆ ದೀರ್ಘವಾದ ಪ್ರಸ್ತಾವನೆ ಆವಶ್ಯಕವಾದರೂ ಅದನ್ನು ಬರೆಯುವ ಶಕ್ತಿ ಈಗ ನನಗಿಲ್ಲ. ಮುದ್ರಣಕ್ಕೆ ಯೋಗ್ಯವಾಗುವಂತೆ ಇದನ್ನು ಪರಿಷ್ಕರಿಸುವ ಆವಶ್ಯಕತೆಯೂ ಇದೆ. ನನ್ನ ಆರೋಗ್ಯವು ತೀರ ಹದಗೆಟ್ಟಿರುವುದರಿಂದ ಈ ದೊಡ್ಡ ಕಾರ್ಯವು ನನ್ನಿಂದ ಸಾಧ್ಯವಾಗದು. ಅಲ್ಲಲ್ಲಿ ಅಡಿಟಿಪ್ಪಣಿಗಳನ್ನು ಬರೆಯಬೇಕೆಂದು ಮೊದಲು ತೋರಿತು. ಆದರೆ ಡಿ.ವಿ.ಜಿ.ಯವರ ಆಶಯವು ನನ್ನ ಅಭಿಮತಕ್ಕಿಂತ ಭಿನ್ನವಾಗಿದ್ದಿರಬಹುದಾದ್ದರಿಂದ ಟಿಪ್ಪಣಿಗಳನ್ನು ಬರೆಯುವುದೂ ಯುಕ್ತವಲ್ಲವೆಂದು ಆ ಕಾರ್ಯಕ್ಕೆ ನಾನು ಕೈಹಾಕಲಿಲ್ಲ. ಗ್ರಂಥಪ್ರಕಾಶಕರಾದ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯವರು ಸಮರ್ಥರಾದ ಇನ್ನೊಬ್ಬ ವಿದ್ವಾಂಸರಿಂದ ಪ್ರಸ್ತಾವನೆಯನ್ನು ಬರೆಸಿದರೆ ಉತ್ತಮವೇ ಸರಿ. ಅದು ಆ ಸಂಸ್ಥೆಯವರ ಇಚ್ಛೆಗೆ ಸೇರಿದುದು.

ಹಸ್ತಪ್ರತಿಯ ಮೇಲೆ ಸ್ವತಃ ಡಿ.ವಿ.ಜಿ.ಯವರೇ ದಶೋಪನಿಷತ್ತುಗಳಲ್ಲಿರುವ ವಿಷಯಗಳನ್ನು ಸಂಗ್ರಹವಾಗಿ ನಿರೂಪಿಸಬೇಕೆಂದು ಬರೆದಿದ್ದರು. ಯಾರಿಗೆ ಆ ಸೂಚನೆಯನ್ನಿತ್ತಿದ್ದರೋ ತಿಳಿಯದು. ಅದನ್ನು ಯಾರೂ ಬರೆದಿರಲಿಲ್ಲ. ಆದ್ದರಿಂದ ನಾನು ಆ ಉಪನಿಷತ್ತುಗಳಲ್ಲಿರುವ ವಿಷಯಗಳನ್ನು ಯಥಾಮತಿಯಾಗಿ ಸಂಗ್ರಹಿಸಿ ಈ ಗ್ರಂಥದ ಅನುಬಂಧದಲ್ಲಿ ಸೇರಿಸಿದ್ದೇನೆ. ಹನ್ನೊಂದನೆಯದಾದ ಶ್ವೇತಾಶ್ವತರೋಪನಿಷತ್ತು ಬಹುಮುಖ್ಯವಾದದ್ದು. ಶ್ರೀಶಂಕರಾಚಾರ್ಯರು ತಮ್ಮ ಪ್ರಸ್ಥಾನತ್ರಯ ಭಾಷ್ಯಗಳಲ್ಲಿ ಈ ಉಪನಿಷತ್ತಿನ ಮಂತ್ರಗಳನ್ನು ವಿಶೇಷವಾಗಿ ಉದಾಹರಿಸಿದ್ದಾರೆ. ಆದ್ದರಿಂದ ಈ ಶ್ವೇತಾಶ್ವತರೋಪನಿಷತ್ತಿನ ವಿಷಯವನ್ನೂ ಸಂಗ್ರಹವಾಗಿ ಬರೆದು ಸೇರಿಸಿದ್ದೇನೆ.

ಸ್ವತಃ ಡಿ.ವಿ.ಜಿ.ಯವರೇ ಈ ಪುಸ್ತಕಕ್ಕೆ 'ವೇದ-ವೇದಾಂತ — ಒಂದು ಸಣ್ಣ ಪರಿಚಯ' ಎಂದು ನಾಮಕರಣ ಮಾಡಿದ್ದಾರೆ. ಒಂದು ಸಣ್ಣ ಪರಿಚಯ — ಎಂಬ ನುಡಿಯೇ ಇನ್ನೂ ಹೇಳಬೇಕಾದದ್ದು ಬಹಳ ಇದೆ, ಪ್ರಕೃತದಲ್ಲಿ ಇಷ್ಟು ಸಾಕು — ಎಂಬುದನ್ನು ಸೂಚಿಸುತ್ತದೆ.

ಧೀಮಂತರೂ ಮಹಾಚಿಂತಕರೂ ಆದ ಡಿ.ವಿ.ಜಿ.ಯವರ ಒಂದೊಂದು ಮಾತೂ ಘನವಾದದ್ದು, ಅರ್ಥವತ್ತಾದದ್ದು, ತೂಕವುಳ್ಳದ್ದು, ಗ್ರಾಹ್ಯವಾದದ್ದು. ವೇದವೇದಾಂತಗಳ ವಿಷಯವಾಗಿ ಯಾರಿಂದ ಎಷ್ಟು ಹೇಳಿ ಮುಗಿಸಲಾದೀತು? ಮನನೀಯವಾದ ಇಷ್ಟು ವಿಚಾರಗಳು ಲಭ್ಯವಾದವೆಂದು ಸಂತೋಷಿಸಬಹುದು.

ಈ ಪುಸ್ತಕವು ಬಹಳವರ್ಷಗಳ ಹಿಂದೆಯೇ ಪ್ರಕಟವಾಗಬೇಕಾಗಿತ್ತು. ಇಷ್ಟು ಕಾಲಹರಣವಾದುದಕ್ಕೆ ನಾನು ಕಾರಣನಾದೆನೆಂದು ಮನಸ್ಸಿಗೆ ತುಂಬ ವಿಷಾದ

ವಾಗಿದೆ. ಡಿ.ವಿ.ಜಿ.ಯವರ ಪುಣ್ಯಸ್ಮೃತಿಗೆ ನಾನು ಅಪರಾಧ ಮಾಡಿದಂತಾಯಿತು.

ಹಸ್ತಲಿಖಿತಗಳ ಕಡತವನ್ನು ನನಗೆ ತಂದುಕೊಟ್ಟವರು ದಿವಂಗತ ಶ್ರೀ ಡಿ. ವಿ. ರಾಮರಾಯರು. ಪ್ರಕಟನಾರ್ಹವೆಂದು ಈ ಪುಸ್ತಕವನ್ನು ಹುಡುಕಿ ತೆಗೆದವರು ಶ್ರೀ ಕೆ. ಪಿ. ರಾಜಗೋಪಾಲ್. ಗ್ರಂಥವನ್ನು ಪರಿಶೀಲಿಸಿ ಸಲಹೆ ಯನ್ನಿತ್ತವರು ಡಾ॥ ಪಾದೇಕಲ್ಲು ವಿಷ್ಣುಭಟ್ಟರು. ಮುದ್ರಿಸಿ ಪ್ರಕಾಶನಗೊಳಿಸಿದವರು ನರಸಿಂಹರಾಜ ಕಾಲೊನಿಯ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯವರು. ಇವರೆಲ್ಲರಿಗೂ ನನ್ನ ಕೃತಜ್ಞತಾಪೂರ್ವಕ ವಂದನೆಗಳು ಸಲ್ಲುತ್ತವೆ.

ಬೆಂಗಳೂರು — **ವಿದ್ವಾನ್ ಎನ್. ರಂಗನಾಥಶರ್ಮಾ**

ದಿನಾಂಕ 2-2-2002

# ವಿಷಯ ಸೂಚಿಕೆ



ಡಿ. ವಿ. ಜಿ. ಎಂದೇ ಪ್ರಸಿದ್ಧರಾದ ಡಿ. ವಿ. ಗುಂಡಪ್ಪ (೧೮೮೭-೧೯೭೫) ಸಾಹಿತ್ಯ-ಪತ್ರಿಕೋದ್ಯಮಗಳಲ್ಲೂ ಸಾರ್ವಜನಿಕ ಜೀವನದಲ್ಲೂ ಖ್ಯಾತನಾಮರಾಗಿದ್ದವರು. ಜೀವನಾನುಭವದ ಸೂತ್ರರೂಪವೆನ್ನಬಹುದಾದ ಅವರ **ಮಂಕುತಿಮ್ಮನ ಕಗ್ಗ** ಕನ್ನಡ ಭಾಷೆಯ ಅತ್ಯಂತ ಜನಪ್ರಿಯ ಕೃತಿಗಳಲ್ಲೊಂದೆನಿಸಿದೆ. ತತ್ತ್ವಜಿಜ್ಞಾಸೆ, ಕಾವ್ಯ, ನಾಟಕ, ಜೀವನಚರಿತ್ರೆ, ರಾಜ್ಯಶಾಸ್ತ್ರ, ನೆನಪಿನ ಸಾಹಿತ್ಯ ಮೊದಲಾದ ಹಲವಾರು ಸಾಹಿತ್ಯ ಪ್ರಕಾರಗಳನ್ನು ಅವರು ಶ್ರೀಮಂತಗೊಳಿಸಿದರು. ೧೯೬೧ರಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಅವರಿಗೆ ಗೌರವ ಡಾಕ್ಟೋರೇಟ್ ಪದವಿಯನ್ನಿತ್ತಿತು. ಅವರು ಗೋಖಲೆ ಸಂಸ್ಥೆಯಲ್ಲಿ ನೀಡಿದ ಉಪನ್ಯಾಸಗಳ ಸಂಕಲನವಾದ **ಶ್ರೀಮದ್ಭಗವದ್ಗೀತಾ ತಾತ್ಪರ್ಯ: ಜೀವನಧರ್ಮಯೋಗ** ಕೃತಿಗೆ ೧೯೬೭ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ದೊರೆಯಿತು. ೧೯೭೪ರಲ್ಲಿ ರಾಷ್ಟ್ರಾಧ್ಯಕ್ಷರು ಅವರಿಗೆ **ಪದ್ಮಭೂಷಣ** ಪ್ರಶಸ್ತಿ ನೀಡಿದರು.

ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ ಸ್ಥಾಪನೆಗೂ ಬೆಳವಣಿಗೆಗೂ ಕಾರಣರಾದವರು ಡಿ. ವಿ. ಗುಂಡಪ್ಪನವರು. ಮೂರು ದಶಕಗಳಿಗೂ ಹೆಚ್ಚು ಕಾಲ ಸಂಸ್ಥೆಯ ಗೌರವ ಕಾರ್ಯದರ್ಶಿಯಾಗಿ ಅದನ್ನು ಹಂತಹಂತವಾಗಿ ಬೆಳೆಸಿ ಅದಕ್ಕೆ ಪ್ರತಿಷ್ಠೆ ತಂದಿತ್ತರು.

# ೧. ವೇದವೆಂದರೇನು?

‘ವೇದ’ವೆಂದರೆ ಜ್ಞಾನ, ಅರಿವು, ತಿಳಿವು. ಜ್ಞಾನಸಾಧನವನ್ನೂ ‘ವೇದ’ವೆಂದು ಕರೆಯಬಹುದು. ಇದು ಭಗವದ್ವಿಷಯಕವಾದ ಜ್ಞಾನ. ಯಾವ ಒಂದನ್ನು ತಿಳಿದುಕೊಂಡರೆ ಮನುಷ್ಯನು ತನ್ನ ಎಲ್ಲ ಜೀವನಸಂದರ್ಭಗಳನ್ನೂ ಅರ್ಥಮಾಡಿಕೊಳ್ಳಲಾದೀತೋ, ಅಂಥ ತಿಳಿವಳಿಕೆ ಜ್ಞಾನ. ಇಂಥ ಜ್ಞಾನವುಳ್ಳ ಪದರಾಶಿ ವೇದ. ವೇದ, ವಿದ್ಯೆ — ಇವೆರಡೂ ಒಂದೇ ಧಾತುವಿನಿಂದ ಹುಟ್ಟಿದ ಪದಗಳು. ವಿದ = ಜ್ಞಾನೇ. ಇದರಿಂದಲೇ ‘ಸಂವಿತ್’.

ವೇದವು ನಾಲ್ಕು ರಾಶಿಗಳೆಂದು ಗಣಿಸುವುದು ಪುರಾತನ ಸಂಪ್ರದಾಯ. ಅವು ಕ್ರಮವಾಗಿ (೧) ಋಗ್ವೇದ, (೨) ಯಜುರ್ವೇದ, (೩) ಸಾಮವೇದ ಮತ್ತು (೪) ಅಥರ್ವವೇದ. ಅಥರ್ವವನ್ನು ಮೊದಲನೆಯದಾಗಿ ಹೇಳುವುದು ಒಂದು ಸಂಪ್ರದಾಯ. ಇದರಲ್ಲಿ ಒಂದು ನ್ಯಾಯ ತೋರುತ್ತದೆ. ಮನುಷ್ಯನನ್ನು ಹುಟ್ಟಿದ ದಿವಸದಿಂದ ನಾನಾ ಭಯ-ಭೀತಿಗಳು ಕಾಡುತ್ತವಲ್ಲವೆ? ಅವುಗಳ ಪರಿಹಾರವೇ ಪ್ರಾಕೃತಮನುಷ್ಯನ ಮೊದಲನೆಯ ಯೋಚನೆಯಾಗಿದ್ದಿರಬಹುದು.

ಜ್ಞಾನದ ದಾರಿಗಳು ಎರಡು:

(೧) ಶ್ರದ್ಧೆಯದು;

(೨) ತರ್ಕದ್ದು.

(೧) ಶ್ರದ್ಧೆಯೆಂದರೆ ರುಜುವಾತಿಲ್ಲದಿರುವ ಸಂಗತಿಯಲ್ಲಿ ನಂಬಿಕೆ. ಆಪ್ತವಾಕ್ಯ, ಹಿರಿಯರ ಮಾತು, ಸಂಪ್ರದಾಯ ಇವುಗಳಲ್ಲಿ ನಂಬಿಕೆ. ಇದೇ ಶ್ರದ್ಧೆ, ವಿಚಾರಾಪೇಕ್ಷೆಯಿಲ್ಲದ ವಿಶ್ವಾಸ.

(೨) ವಿಚಾರಸಿದ್ಧವಾದ ಶ್ರದ್ಧೆಯನ್ನು ತರ್ಕವೆನ್ನಬಹುದು. ಇದು ಕಾರ್ಯಕಾರಣ ಭಾವಗಳನ್ನೂ ತಿಳಿದು ಮೊದಲು ಪರಿಶೀಲಿಸಿರುತ್ತದೆ. ಅದರ ಫಲಿತಾಂಶವೇ ಒಂದು ಸಿದ್ಧಾಂತರೂಪವಾದ ಜ್ಞಾನ.

ಸ್ಕೂಲಿನಲ್ಲಿಯೋ ಮನೆಯಲ್ಲಿಯೋ ಹಿರಿಯರು —

ಒಂಬತ್ತು ಒಂಬತ್ತಲ = ಎಂಬತ್ತೊಂದು — ಎಂದು ಹೇಳಿಕೊಟ್ಟರೆ ಪ್ರಶ್ನೆ ಮಾಡದೆ ಅದನ್ನು ನಂಬಿ ಗ್ರಹಿಸುವುದು ಶ್ರದ್ಧೆ.

ಒಂಬತ್ತು ಹುಣಸೆಬೀಜದ ಒಂಬತ್ತು ರಾಶಿಗಳನ್ನೂ ಒಂದು, ಎರಡು, ಮೂರು... ಎಂದು ಎಣಿಸಿ ಇದು ಒಟ್ಟು ಎಂಬತ್ತೊಂದು ಹುಣಸೆಬೀಜ ಎಂದು ತಾನಾಗಿ ತಿಳಿವಳಿಕೆ ತಂದುಕೊಳ್ಳುವುದು ತರ್ಕ. ಇದೂ ಸರಿಯಾದ ದಾರಿಯೇ.

ಆದರೆ ಒಂದು ಅಂಶವನ್ನು ಗಮನದಲ್ಲಿರಿಸಿಕೊಳ್ಳಬೇಕು. ವಿದ್ಯಾರ್ಥಿಗೆ ಎಲ್ಲಕ್ಕೂ ತಳಹದಿಯಾಗಿ ಒಂದು, ಎರಡು, ಮೂರು... ಎಂಬ ಅನುಕ್ರಮದಲ್ಲಿಯಾದರೂ ನಂಬಿಕೆಯಿರಬೇಕಷ್ಟೆ? ಹೀಗೆ ಕೊಂಚಮಟ್ಟಿನ ಶ್ರದ್ಧೆ ಅಥವಾ ವಿಶ್ವಾಸ ಎಂಥ ಜ್ಞಾನಕ್ಕಾದರೂ ತಳಹದಿಯಾಗಿರಲೇಬೇಕಾಗುತ್ತದೆ. ಹೀಗೆ ಶ್ರದ್ಧೆಯೆಂಬುದು ಅವಶ್ಯವಾದ ಮೊದಲನೆಯ ಜ್ಞಾನಸಾಧನ. ಆದುದರಿಂದಲೇ ಬ್ರಹ್ಮಚಾರಿಯಿಂದ — ಹೊಸದಾಗಿ ಉಪನೀತನಾದ ವಟುವಿನಿಂದ ಹೇಳಿಸುವ ಮಂತ್ರದಲ್ಲಿ:

— **"ಸ್ವಸ್ತಿ ಶ್ರದ್ಧಾಂ ಮೇಧಾಂ ಯಶಃ ಪ್ರಜ್ಞಾಂ"** — ಎಂದು ಪ್ರಾರ್ಥನೆ ಮಾಡಿಸುತ್ತಾರೆ. ಮೊದಲು ಶ್ರದ್ಧೆ. ಯಾವುದಾದರೂ ಒಂದರಲ್ಲಿ ಸಂಪೂರ್ಣ ವಿಶ್ವಾಸವಿರಬೇಕು. ಆ ಆಧಾರದ ಮೇಲೆ ಸ್ವತಂತ್ರವಿಚಾರದ ಕಟ್ಟಡ. ಶ್ರದ್ಧೆಯಿಂದ ಜ್ಞಾನ; ತರ್ಕದಿಂದ ವಿಜ್ಞಾನ.

ನಮಗೆ ಎರಡು ಸಾಧನಗಳೂ ಬೇಕಾದವು — ಎರಡು ಕಣ್ಣುಗಳಂತೆ. ಶ್ರದ್ಧೆಗೆ ತರ್ಕದಿಂದ ಪುಷ್ಟಿ; ತರ್ಕಕ್ಕೆ ಶ್ರದ್ಧೆಯಿಂದ ಪೋಷಣೆ. ಹೀಗೆ ಅವು ಪರಸ್ಪರವಿರೋಧಿಗಳಲ್ಲ. ಮನುಷ್ಯರ ಪ್ರಶ್ನೆಗಳಲ್ಲಿ ಕೆಲವಕ್ಕೆ ಒಂದು ದಾರಿಯಿಂದಲೂ ಇನ್ನು ಕೆಲವಕ್ಕೆ ಇನ್ನೊಂದು ದಾರಿಯಿಂದಲೂ ಉತ್ತರ ಹುಡುಕುವುದು ನ್ಯಾಯ.

ಯಾವ ವಸ್ತುಗಳು ಪ್ರತ್ಯಕ್ಷವಲ್ಲವೋ ಅವುಗಳನ್ನು ಕುರಿತು ಶ್ರದ್ಧೆ ಉಚಿತವಾಗುತ್ತದೆ. ದೈವ, ಅದೃಷ್ಟ, ಕಾಲಗತಿ, ಆತ್ಮ, ಜೀವ, ಮೃತ್ಯು — ಇಂಥ ವಿಚಾರಗಳಲ್ಲಿ ಶ್ರದ್ಧೆಯೊಂದೇ ನಮಗಿರುವ ಗತಿ. ಅದನ್ನು ಬಿಟ್ಟರೆ ನಾವು ಗತಿಯಿಲ್ಲದವರಾಗುತ್ತೇವೆ.

ಇಂಥ ವಿಷಯಗಳ ಹೊರತು ಕೇವಲ ಲೌಕಿಕಸಂಗತಿಗಳಲ್ಲಿ ನಮ್ಮ ತರ್ಕ ಕೆಲಸಕ್ಕೆ ಬರುತ್ತದೆ. ಯಾವ ವಿಷಯಗಳು ಪ್ರತ್ಯಕ್ಷಗಳಾಗಿ ನಮ್ಮ ಪರೀಕ್ಷೆಗಳಿಗೆ ಸಿಕ್ಕತಕ್ಕವಾಗಿವೆಯೋ ಅಂಥ ವಿಷಯಗಳಲ್ಲಿ ತರ್ಕವನ್ನು ಬಿಡುವುದು ಅಪಾಯಕಾರಿ; ಕಣ್ಣಿನಲ್ಲಿ ದೃಷ್ಟಿಯಿರುವಾಗ ಕಣ್ಣುಕಟ್ಟಿಕೊಂಡು ಕುಳಿತಂತೆ.

ಈಗಿನ ವಿಜ್ಞಾನ(Science)ಯುಗದಲ್ಲಿ ತರ್ಕ ಪ್ರಬಲಿಸಿದೆ. ಇದರ ಪ್ರಭಾವದಿಂದ ಜನ ಶ್ರದ್ಧೆಯ ಪ್ರಯೋಜನವನ್ನು ಮರೆತಿದ್ದಾರೆ. ಆದರೆ, ಸತ್ತ್ವವಿಲ್ಲದ ಕಣ್ಣಿನ ದೃಷ್ಟಿ (ಕನ್ನಡಕದ ಮೂಲಕ) ಎಷ್ಟು ದೂರ ಸಾಗೀತು?

ವೇದವು ಶ್ರದ್ಧೆಯ ಆಧಾರದ ಮೇಲೆ ನಿಂತಿರತಕ್ಕದ್ದು. ಶ್ರದ್ಧೆಯಿಲ್ಲದವನಿಗೆ ಅವು ಬರಿ ಶಬ್ದಗಳು ಅಥವಾ ಅಕ್ಷರಗಳು.

ಜಗದ್ರಹಸ್ಯವಿಚಾರದಲ್ಲಿ ಪೂರ್ವದ ಆರ್ಯರಿಗಾದ ಪರಿಶ್ರಮ ಅನುಭವಗಳ ವರದಿಯೇ ವೇದವೆಂದು ಹೇಳಬಹುದು. ಅವರು ಮಾಡಿದ ಅನ್ವೇಷಣೆ, ಊಹಾಪೋಹಗಳು, ಚಿಂತನೆ, ಅನುಸಂಧಾನ, ತತ್ತ್ವಸ್ಫುರಣೆ, ಮನನ, ಸಿದ್ಧಾಂತ — ಈ ನಾನಾ ಮನೋವ್ಯಾಪಾರ-ಬುದ್ಧಿವ್ಯಾಪಾರಗಳ ನಿರೂಪಣೆಯೇ ವೇದ.

ಆ ವ್ಯಾಪಾರಸರಣಿ ಸಾವಿರಾರು ವರ್ಷ ಅವಿಚ್ಛಿನ್ನವಾಗಿ ಪರಂಪರೆಯಾಗಿ ನಡೆದಿರಬೇಕು. ಅದಕ್ಕೆ ಕಾಲವನ್ನೂ ಕರ್ತೃವನ್ನೂ ಗೊತ್ತುಮಾಡಲಾಗದು.

# ೨. ವೇದವು ಅಪೌರುಷೇಯ

ಇಲ್ಲಿ 'ಅಪೌರುಷೇಯ' ಎಂದರೆ 'ಪುರುಷಕೃತವಲ್ಲದ್ದು' ಎಂದು ಅರ್ಥ. 'ಪುರುಷಕೃತ' ಎಂಬಲ್ಲಿ 'ಕೃತ' ಎಂಬುದು ಮುಖ್ಯಪದ. 'ಪುರುಷಕೃತವಲ್ಲ' ಎಂದರೆ ಪುರುಷೋಚ್ಚಾರಿತವಲ್ಲ ಎಂದು ಅರ್ಥವಾಗದು. ವೇದವು ಪುರುಷಮುಖದಿಂದ ಬಂದದ್ದೇ. ಆದರೆ ಅದರ ಮೂಲಪ್ರೇರಣೆ ಅಥವಾ ಮೂಲಚೋದನೆ ಪುರುಷ ಬುದ್ಧಿಯಿಂದ ಆದದ್ದಲ್ಲ. ಆ ಚೋದನೆ ಸ್ವಯಮುದ್ಭೂತವಾದದ್ದು, ಸ್ವತಸ್ಸಿದ್ಧ ವಾದದ್ದು.

ವೇದವು ಕೃತಕವಾದದ್ದಲ್ಲ — ಬುದ್ಧಿಚಮತ್ಕಾರಕಾರ್ಯವಲ್ಲ. ಕೆಲಮಂದಿ ಮಹಾಪುರುಷರಿಗಾದ ಅಂತಃಸ್ಫೂರ್ತಿಯಿಂದ ಬಂದದ್ದು ವೇದ. ವೇದವು ಕಲಿಸಿ ಬಂದ ವಿದ್ಯೆಯಲ್ಲ. ಅದನ್ನು ಮೊದಲು ಯಾವ ಮನುಷ್ಯನೂ ಇನ್ನೊಬ್ಬ ಮನುಷ್ಯನಿಗೆ ಕಲಿಸಲಿಲ್ಲ. ಅದನ್ನು ಇಂದಿನ ಜನಕ್ಕೆ ಅವರ ಪೂರ್ವಿಕರು, ಆ ಪೂರ್ವಿಕರಿಗೆ ಅವರ ಪುರಾತನರು, ಆ ಪುರಾತನರಿಗೆ ಮತ್ತವರ ಪ್ರಾಚೀನರು, ಆ ಪ್ರಾಚೀನರಿಗೆ ಅವರ ಪೂರ್ವಜರು — ಹೀಗೆ ಸೃಷ್ಟಿಕಾಲದಿಂದ ಹಿರಿಯರಿಂದ ಕಿರಿಯರಿಗೆ ವಂಶಪರಂಪರೆ ಯಲ್ಲಿ ಬಾಯಿಪಾಠವಾಗಿ ಬಂದಿರುವುದು ವೇದ. ಮನುಷ್ಯಪ್ರಾಣಿಯನ್ನು ಯಾರು ಸೃಷ್ಟಿಮಾಡಿದವನೋ ಅವನೇ ವೇದವನ್ನೂ ಸೃಷ್ಟಿಮಾಡಿದವನು. ಮನುಷ್ಯನ ಆರಂಭವೇ ವೇದದ ಆರಂಭ.

ನಾವು ಯಾವುದಾದರೊಂದು ಕಾಲಾವಧಿಯನ್ನು ಮನುಷ್ಯಜಾತಿಯ ಜನ್ಮದಿನ ವೆಂದು ಊಹಿಸಬಹುದಾದರೆ ಆ ಕಾಲದ ಜನರೇ ತತ್ತ್ವವಿಚಾರದ ಮೂಲಪುರುಷ ರೆಂದು ಭಾವಿಸಬಹುದು. ಅವರಿಗೂ ಹುಟ್ಟು, ಹಸಿವು, ಸಾವು, ನೋವುಗಳಿಂದ ಚಿಂತೆಯುಂಟಾಗಿರಬೇಕು. ಅವರಿಗೂ ಆಕಾಶ, ಭೂಮಿ, ಹಗಲು, ಇರುಳು, ಬಿಸಿಲು, ಮಳೆ, ಮೋಡ, ಗುಡುಗು, ಮಿಂಚು — ಇಂಥಾ ಪ್ರಕೃತಿವ್ಯತ್ಯಾಸಗಳ ಕಾರಣವೇನೆಂದು ಪ್ರಶ್ನೆ ಹುಟ್ಟಿರಬೇಕು. ಬಾಳಿನ ಅರ್ಥವೇನು? ಲೋಕದ ಒಡೆಯನಾರು? — ಈ ಪ್ರಶ್ನೆಗಳು ಅವರನ್ನೂ ಕಾಡಿರಬೇಕು. ಅವರಲ್ಲಿ ಕೆಲವರಾದರೂ ಈ ಮೂಲಪ್ರಶ್ನೆಗಳನ್ನು ತೀವ್ರವಾಗಿ ಮನಸ್ಸಿಗೆ ತೆಗೆದುಕೊಂಡು ತದೇಕಚಿತ್ತರಾಗಿ ಚಿಂತಿಸಿರಬೇಕು. ಅಂಥವರೇ ಮಹರ್ಷಿಗಳು. ಅವರು ಮಾಡಿದ ತತ್ತ್ವಾರ್ಥಚಿಂತನೆಯೇ ತಪಸ್ಸು. ಅವರು ತಪಸ್ಸಿನಲ್ಲಿ ಮಗ್ನರಾಗಿದ್ದಾಗ ಅವರ ಒಳಗಣ್ಣಿಗೆ ಹೊಳೆದ ಸತ್ಯಬಿಂಬಗಳೂ, ಅನುಭವಚಿತ್ರಗಳೂ ಮಾತಿನ ರೂಪದಲ್ಲಿ ಹೊರಹೊಮ್ಮಿದವು. ಆ ಆವೇಶದ ವಾಕ್ಕೇ ವೇದ. ಅದೇ ಋತ. ಯಾವ ತಿಳಿವಳಿಕೆ

ತಾನಾಗಿ — ಇತರರ ಪ್ರೇರಣೆ ಬೋಧನೆಗಳಿಲ್ಲದೆ — ಅಂತರಂಗದಲ್ಲಿ ಸ್ವಾಭಾವಿಕವಾಗಿ ರೂಪುಗೊಂಡಿತೋ ಆ ತತ್ತ್ವಜ್ಞಾನವೇ ಋತ, ಅದೇ ವೇದ. ಹೀಗೆ ಅದು ಅಪೌರುಷೇಯ. ಯಾವುದು ತಾನಾಗಿ — ಅನ್ಯಪ್ರಯತ್ನವಿಲ್ಲದೆ, ಅನ್ಯಾಧೀನವಾಗದೆ — ಸ್ವತಂತ್ರವಾಗಿ ನಡೆಯುತ್ತದೆಯೋ ಅದು ಋತ.

ವೇದದ ವಿಷಯವು ಬ್ರಹ್ಮ. ಬ್ರಹ್ಮದ ವಿಷಯವನ್ನು ಬ್ರಹ್ಮವೇ ಹೇಳಿಕೊಡಬೇಕಲ್ಲದೆ ಇತರರು ತಿಳಿಸುವಂತಿಲ್ಲ. ಏಕೆಂದರೆ ಬ್ರಹ್ಮವನ್ನೇ ಕಂಡವರಾರು? ಬ್ರಹ್ಮವು ರಹಸ್ಯವಸ್ತು. ಅದು ತಾನಾಗಿ ತನ್ನ ವಿಷಯವನ್ನು ಹೇಳಿದರೆ ಮನುಷ್ಯನಿಗೆ ಅದರ ತಿಳಿವು ದೊರೆಯುತ್ತದೆ. ಅದರ ವಿಷಯವನ್ನು ಅದೇ ತಾನಾಗಿ ಹೇಳದಿದ್ದರೆ ಬೇರೆ ಯಾರೂ ಅದನ್ನು ಹೇಳುವವರಿಲ್ಲ. ಅದನ್ನು ಕಾಣದವರು ಅದನ್ನು ಕುರಿತು ಹೇಳುವವೆಂದರೆ ಅದೂ ಊಹಾಪೋಹದ ಮಾತಾದೀತೇ ಹೊರತು ಸತ್ಯವೆಂದು ನಂಬಲರ್ಹವಾಗದು. ಆದ್ದರಿಂದಲೇ

**ಶಾಸ್ತ್ರಯೋನಿತ್ವಾತ್॥** *(ಬ್ರಹ್ಮಸೂತ್ರ ೧-೧-೩)*

(೧) ಬ್ರಹ್ಮವನ್ನು — ಎಂದರೆ ಭಗವದ್ವಸ್ತುವನ್ನು ಕುರಿತ ತಿಳಿವಳಿಕೆಗೆ ಜನ್ಮಸ್ಥಳ (ಯೋನಿ = ಹುಟ್ಟಿನೆಡೆ) ವೇದ(ಶಾಸ್ತ್ರ)ವೇ.

(೨) ಆ ತಿಳಿವಳಿಕೆಯನ್ನು ಅದರಲ್ಲಿ ತುಂಬಿರಿಸಿರುವ ಜ್ಞಾನಶಕ್ತಿ ಯಾವುದೆಂದರೆ ಅದೇ ವಿದ್ಯೆ. ಅದೂ ಬ್ರಹ್ಮವೇ. ವೇದವೆಂದರೆ ಜ್ಞಾನ. ಸರ್ವವಿಧದ ಜ್ಞಾನಕ್ಕೂ, ಸರ್ವವಿದ್ಯೆಗೂ ಮೂಲನಿಧಿಯೂ ಆಕರಸ್ಥಾನವೂ ಆದದ್ದು ಬ್ರಹ್ಮ.

ವೇದವು ಅಕೃತಕವೂ ಸ್ವತಸ್ಸಿದ್ಧವೂ ಆದದ್ದರಿಂದ ಅದು ಅಪೌರುಷೇಯ. ಅಪೌರುಷೇಯವಾದದ್ದರಿಂದ ಪ್ರಾಮಾಣಿಕ — ಪೂರ್ಣವಿಶ್ವಸನೀಯ.

ಪುರುಷಕೃತಗಳು ಕಾವ್ಯ-ಕಾದಂಬರಿಗಳು. ಇವು ಮನುಷ್ಯೇಚ್ಛೆ ಮನುಷ್ಯಸಂದೇಹಗಳಿಂದ ಆದವು; ಶುದ್ಧಸತ್ತ್ವಾನುಭವದಿಂದ ಆದುವಲ್ಲ. ಅವುಗಳಲ್ಲಿ ಬ್ರಹ್ಮಕೀರ್ತನೆ ಅಷ್ಟಿಷ್ಟೇ ಕಾಣಬರಬಹುದು — ಭಾಗಶಃ. ಪೂರ್ಣದರ್ಶನ ದೊರೆಯುವುದು ವೇದದಲ್ಲಿ.

ವೇದವು ಸ್ವಯಂಭೂ — ಅಕೃತಕ — ಸ್ವತಸ್ಸಿದ್ಧ. ಆದದ್ದರಿಂದಲೇ ಅದು ಸ್ವತಃ ಪ್ರಮಾಣ. ಅದು ನಿಜವೆಂಬುದಕ್ಕೆ ಬೇರೆ ರುಜುವಾತು ಅವಶ್ಯವಿಲ್ಲ.

ಯಾವ ಮಹನೀಯರ ಬಾಯಿಯಿಂದ ಆವೇಶಕಾಲದಲ್ಲಿ ತತ್ತ್ವರಹಸ್ಯಗರ್ಭಿತ

ಗಳಾದ ವಾಕ್ಯಗಳು ಹೊರಟು ಬಂದವೋ ಅವರನ್ನು ಇತರರು ಪ್ರಾಮಾಣಿಕರೆಂದು ಅಂಗೀಕರಿಸಿದರು. ಆ ಮಹನೀಯರು ಮನುಷ್ಯರೇ ಆಗಿದ್ದರೂ ಅವರಿಗೆ ಸ್ವಾರ್ಥ ಚಿಂತನೆಯಿರಲಿಲ್ಲ. ಅವರಿಗೆ ಲಾಭ ಪ್ರಸಿದ್ಧಿಗಳ ಯೋಚನೆ ಇರಲಿಲ್ಲ. ಅವರಿಗೆ ಯಾರಲ್ಲಿಯೂ ಅಸೂಯೆಯಾಗಲಿ, ದ್ವೇಷವಾಗಲಿ ಇರಲಿಲ್ಲ. ಅವರು ಸತ್ಯದರ್ಶನ ವೊಂದನ್ನಲ್ಲದೆ ಬೇರೆ ಏನನ್ನೂ ಬಯಸಿದವರಲ್ಲ. ತಾವು ಕಂಡು ತಿಳಿದ ಸತ್ಯದ ಸಂತೋಷವನ್ನು ಇತರರೊಡನೆ ಹಂಚಿಕೊಳ್ಳಬೇಕೆಂಬ ಲೋಕಮೈತ್ರಿಯೊಂದೇ ಅವರಿಗಿದ್ದ ಆಶಯ. ಆದದ್ದರಿಂದ ಅವರು ಮನುಷ್ಯಲೋಕಕ್ಕೆ ಆಪ್ತರು. ಅವರ ವಾಕ್ಯವು ಆಪ್ತವಾಕ್ಯ. ಮಗುವಿಗೆ ತಾಯಿಯೂ ತಂದೆಯೂ ಹೇಳುವ ಮಾತಿನಲ್ಲಿ ಹೇಗೆ ವಂಚನೆಯಿರಲಾರದೋ ಹಾಗೆ ಮಹರ್ಷಿವಚನದಲ್ಲಿಯೂ ವಂಚನೆಯಿರದು. ಅವರು ಕಂಡದ್ದನ್ನು ಅವರು ಆತ್ಮಸಂತುಷ್ಟಿಯಿಂದ ನುಡಿದವರು — ಲೋಕಹಿತಕ್ಕಾಗಿ ನುಡಿದವರು — ಸ್ವಾರ್ಥಸ್ಪರ್ಶವಿಲ್ಲದೆ ನುಡಿದವರು. ಆದದ್ದರಿಂದ ಅವರ ಮಾತು ಪ್ರಮಾಣವಾಗತಕ್ಕದ್ದು.

ಮನುಷ್ಯನು ಜೀವನದಲ್ಲಿ ದಾರಿಕಾಣಲು ಅವನಿಗೆ ಬೆಳಕು ಬೇಕಲ್ಲವೆ? ಪ್ರಪಂಚವು ಮಬ್ಬುಕವಿದ ಕಾಡಿನಂತೆ ಇರುತ್ತದೆ. ಅವನ ನಾಲ್ಕು ಪಕ್ಕಗಳಲ್ಲಿಯೂ ನೂರಾರು ಮರಬಳ್ಳಿಗಳೆದ್ದು ಹರಡಿ, ನೆರಳ ಮೇಲೆ ನೆರಳು ಚೆಲ್ಲಿ, ಸೂರ್ಯರಶ್ಮಿಗೆ ಅಡ್ಡಗಟ್ಟಿ, ಅವನಿಗೆ ದಿಕ್ಕು ತೋರದಂತಾಗಿರುತ್ತದೆ. ಆಗ ಅವನಿಗೆ ಬೇಕಾದದ್ದು ಒಂದು ಕೈದೀವಿಗೆ. ಅದು ಗಾಳಿಬೀಸಿದಂತೆ ಅಲೆದಾಡದೆ, ಆರಿಹೋಗದೆ ದಟ್ಟವಾಗಿ ಉರಿಯುವ ದೀವಿಗೆಯಾಗಿರಬೇಕು. ಅಂಥ ದೀವಿಗೆ ವೇದವೆಂದು ಮೊದಮೊದಲಿ ನವರು ಅಂಗೀಕರಿಸಿದರು.

ಕೇವಲ ಮನುಷ್ಯಬುದ್ಧಿ ಅಂಥ ದೀವಿಗೆಯಾಗದು. ಮನುಷ್ಯಸ್ವಭಾವ ಚಂಚಲ ವಾದದ್ದು. ಅದರ ಗುರಿಗಳು ನೂರಾರು ಬಗೆ. ಅದು ಒಂದೊಂದು ಕ್ಷಣ ಒಂದೊಂದು ದಿಕ್ಕಿಗೆ ತಿರುಗುತ್ತದೆ; ಇಂದು ಬೇಕಾದದ್ದನ್ನು ನಾಳೆ ಬೇಡವೆನ್ನುತ್ತದೆ; ಇಂದು ತಪ್ಪೆಂದದ್ದನ್ನು ನಾಳೆ ಸರಿಯೆನ್ನುತ್ತದೆ. ಒಬ್ಬನು ಸತ್ಯವೆಂದದ್ದು ಇನ್ನೊಬ್ಬನಿಗೆ ಭ್ರಾಂತಿಯೆನಿಸುತ್ತದೆ. ಒಬ್ಬನ ವಾದ ಇನ್ನೊಬ್ಬನಿಗೆ ಪ್ರಮಾದವಾಗುತ್ತದೆ. ಇದು ಮನುಷ್ಯಸ್ವಭಾವದ ಲಕ್ಷಣವಾದದ್ದರಿಂದ ಕೇವಲ ಮನುಷ್ಯಸ್ವಭಾವದಿಂದ ಹೊರಟ ಮಾತು ತತ್ತ್ವಕ್ಕೆ ಪ್ರಮಾಣವಾಗಲಾರದು.

# ೩. ವೇದದ ಸ್ವರೂಪ

ವೇದ ಸಮಸ್ತವನ್ನೂ — ಮೊದಲಿನಿಂದ ಕಡೆಯವರೆಗೂ — ಒಂದು ವಾಕ್ಯ — ಒಂದೇ ವಾಕ್ಯ — ಒಂದೇ ವಿಷಯವನ್ನು ಕುರಿತದ್ದು ಎಂದು ಹೇಳುವುದು ಸಂಪ್ರದಾಯ. ಎಂದರೆ ವೇದದ ಅನೇಕಪ್ರಕರಣಗಳಲ್ಲಿ ಪೂರ್ವಾಪರವಿರೋಧವಿಲ್ಲ. ಎಲ್ಲವೂ ಪರಾತ್ಪರವಸ್ತುಪ್ರಶಂಸೆಯಲ್ಲಿ ಅನ್ವಯವಾಗತಕ್ಕದ್ದು, ಪೂರ್ವಕಾಂಡವಾದ ಕರ್ಮಮಾರ್ಗಕ್ಕೂ ಉತ್ತರಕಾಂಡವಾದ ವೇದಾಂತಮಾರ್ಗಕ್ಕೂ ಅನ್ಯೋನ್ಯವಿರೋಧ ವಿಲ್ಲ; ಪ್ರತ್ಯುತ ಅವು ಪರಸ್ಪರ ಪರಿಪೂರಕಗಳು — ಎಂಬುದು ವೇದದ ಏಕವಾಕ್ಯತೆಯ ಅಭಿಪ್ರಾಯ. ಈ ಅಭಿಪ್ರಾಯವನ್ನು ಬ್ರಹ್ಮಸೂತ್ರದ (೧-೧-೪)

**‘ತತ್ತು ಸಮನ್ವಯಾತ್’** —

ಎಂಬ ಸೂತ್ರವು ದೃಢಪಡಿಸುತ್ತದೆ. ವೇದದಲ್ಲಿ ಒಂದು ಭಾಗಕ್ಕೂ ಇನ್ನೊಂದು ಭಾಗಕ್ಕೂ ಪರಸ್ಪರ ವೈಷಮ್ಯವಿಲ್ಲ. ಒಂದಕ್ಕೊಂದು ಅನುಬಂಧದಂತೆ ಗ್ರಹಿಸಲ್ಪಡ ಬೇಕಾದದ್ದು.

ವೇದವಾಕ್ಯಗಳಲ್ಲಿ ‘ಸ್ತಾವಕ’ಗಳೆಂದೂ, ‘ಅರ್ಥವಾದ’ಗಳೆಂದೂ, ‘ಸಿದ್ಧಾಂತವಾಕ್ಯ’ ಗಳೆಂದೂ, ‘ಮಂತ್ರ’ಗಳೆಂದೂ, ‘ಯಾಜ್ಯ’ಗಳೆಂದೂ ಅನೇಕ ವಿಧಗಳುಂಟು.

‘ಸ್ತಾವಕ’ವೆಂದರೆ ದೇವತಾಸ್ತೋತ್ರರೂಪವಾದದ್ದು.

ಉದಾ: **‘ಅಗ್ನಿಮೀಳೇ ಪುರೋಹಿತಂ ಯಜ್ಞಸ್ಯ ದೇವಂ’** ಇತ್ಯಾದಿ.

‘ಅರ್ಥವಾದ’ — ಒಂದು ಕರ್ಮದ ಫಲವನ್ನು ಹೇಳಿ ನಮಗೆ ಅದು ಆಕರ್ಷಕ ವಾಗುವಂತೆ ಮಾಡುವ ವಾಕ್ಯ.

ಉದಾ: **‘ಯೋಽಶ್ವಮೇಧೇನ ಯಜತೇ ...’** ಇತ್ಯಾದಿ.

‘ಸಿದ್ಧಾಂತ’ — ತತ್ತ್ವಸ್ವರೂಪವನ್ನು ನಿಷ್ಕರ್ಷೆಯಾಗಿ ತಿಳಿಸುವ ವಾಕ್ಯ.

ಉದಾ: **‘ಆತ್ಮಾ ವೈ ಬ್ರಹ್ಮ’; ‘ಮನೋ ಬ್ರಹ್ಮೇತಿ ವ್ಯಜಾನಾತ್ ...’**

‘ಮಂತ್ರ’ — ಮನನಕ್ಕೆ (ಧ್ಯಾನಕ್ಕೆ) ಯೋಗ್ಯವಾದ ವಾಕ್ಯ.

ಉದಾ: **‘ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ...’**

‘ಯಾಜ್ಯ’ — ಹೋಮಕಾರ್ಯದಲ್ಲಿ ಹೇಳತಕ್ಕದ್ದು.

ಉದಾ: **‘ಇಂದ್ರಾಯ ಸ್ವಾಹಾ’, ‘ಮಹೇಂದ್ರಾಯ ಸ್ವಾಹಾ’.**

ವೇದವು ಅನೂಚಾನವಾಗಿ ಕರ್ಮಕಾಂಡವೆಂದೂ ಜ್ಞಾನಕಾಂಡವೆಂದೂ ಎರಡು ಭಾಗಗಳಾಗಿರುತ್ತದೆ. ಇನ್ನೊಂದು ದೃಷ್ಟಿಯಿಂದ ಅದನ್ನು ಲೋಕವಿಷಯಭಾಗ ವೆಂದೂ, ಅಲೌಕಿಕವಿಷಯಭಾಗವೆಂದೂ ಎರಡು ಜಾತಿಗಳಾಗಿ ವಿಂಗಡಿಸಬಹುದು. ಈ ಎರಡನೆಯ ಲೋಕಾತೀತವಿಷಯದ ಭಾಗವೇ ಆತ್ಮತತ್ತ್ವವಿಚಾರದ್ದು. ಇದೇ ಜ್ಞಾನಕಾಂಡ ಅಥವಾ ವೇದಾಂತ. ಇದರ ಸಿದ್ಧಾಂತಗಳಿಗೆ ಕರ್ಮವಿಷಯಭಾಗವು ಒಂದು ಚೌಕಟ್ಟಿನಂತೆ ಇರುತ್ತದೆ. ಕರ್ಮಕಾಂಡವೆಂಬ ಪೂರ್ವಕಾಂಡವು ನಾನಾ ದೇವತೆಗಳ ಸ್ತೋತ್ರರೂಪದಲ್ಲಿಯೂ ತತ್ಪ್ರೀತ್ಯರ್ಥವಾದ ಯಜ್ಞಯಾಗಾದಿ ಪೂಜಾ ಕರ್ಮಗಳ ಫಲಪ್ರಶಂಸೆಯ ರೂಪದಲ್ಲಿಯೂ ಇರುತ್ತದೆ. ಆ ನಾನಾ ದೇವತೆ ಗಳಾದರೋ ಜ್ಞಾನಭಾಗವಾದ ಉತ್ತರಕಾಂಡದಲ್ಲಿ ಪ್ರತಿಪಾದಿತವಾಗಿರುವ ಪರ ವಸ್ತುವಿನ ತೇಜಃಕಿರಣಗಳೇ, ಅದರ ಶಕ್ತಿಪ್ರಭೇದಗಳೇ ಎಂದು ಸಿದ್ಧಾಂತಿತ ವಾಗಿರುವುದರಿಂದ ಕರ್ಮಕಾಂಡಕ್ಕೂ ಬೆಲೆಯುಂಟು.

**ಕ್ವೇದಮಭ್ರಂ ನಿವಿಶತೇ ।**
**ಕ್ವಾಯಂ ಸಂವತ್ಸರೋ ಮಿಥಃ ।**
**ಕ್ವಾಹಃ ಕ್ವೇಯಂ ದೇವರಾತ್ರೀ ।**
**ಕ್ವ ಮಾಸಾ ಋತವಃ ಶ್ರಿತಾಃ ॥** (ತೈತ್ತಿರೀಯ ಆರಣ್ಯಕ)

ಓ ದೇವ! ಆಕಾಶದಲ್ಲಿ ಮೋಡವನ್ನು ಹಿಡಿದು ನಿಲ್ಲಿಸಿರುವವರಾರು? ಸಂವತ್ಸರ ವನ್ನು ಏರ್ಪಡಿಸಿರುವವರು ಯಾರು? ಹಗಲಿರುಳುಗಳು ಹೇಗೆ ಆಗುತ್ತವೆ? ಮಾಸ ಗಳಿಗೂ ಋತುಗಳಿಗೂ ಆಶ್ರಯವಾವುದು? ಈ ರೀತಿಯಾದ ಪ್ರಶ್ನೆಗಳನ್ನು ಋಷಿಗಳು ಕೇಳಿಕೊಂಡಿದ್ದಾರೆ. ಆ ಪ್ರಶ್ನೆಗಳಿಗೆ ಉತ್ತರಗಳನ್ನು ಅವರೇ 'ಹೀಗಿರಬಹುದು' 'ಹಾಗಿರಬಹುದು' ಎಂದು ಊಹೆ ಮಾಡಿಕೊಂಡಿದ್ದಾರೆ. ಈ ಊಹನೆಗಳು ಕವಿಕಲ್ಪನೆಗಳಂತೆ ಕಾಣುತ್ತವೆ.

**ನಾನಾವರ್ಣತ್ವಾತ್ ಋತೂನಾಂ ನಾನಾಸೂರ್ಯತ್ವಮ್। ಅಷ್ಟೌ ತು ವ್ಯವಸಿತಾ ಇತಿ॥**
(ತೈತ್ತಿರೀಯ ಆರಣ್ಯಕ)

ಆಕಾಶದ ಬಣ್ಣಗಳು ಋತು-ಋತುವಿನಲ್ಲಿಯೂ ಬೇರೆ ಬೇರೆಯಾಗುತ್ತಿರುವುದ ರಿಂದ ಸೂರ್ಯರುಗಳೂ ಬದಲಾಯಿಸುತ್ತಿರಬೇಕು.

ಇಂಥ ಊಹೆಗಳನ್ನು ನಮ್ಮ ಕಾಲದ ಭೌತವಿಜ್ಞಾನಿಗಳು ಪ್ರಾಕೃತವಿಜ್ಞಾನವೆಂದು ಕರೆದಾರು. ವೇದಮಹರ್ಷಿಗಳಿಗೆ ಖಗೋಲಗತಿಯನ್ನು ಪರೀಕ್ಷಿಸಲು 'ದೂರದರ್ಶಿನೀ' (ಟೆಲೆಸ್ಕೋಪ್ Telescope) ಮೊದಲಾದ ಯಂತ್ರಸಾಧನಗಳಿರಲಿಲ್ಲ. ತಮ್ಮ ಬುದ್ಧಿಗೆ ಹೊಳೆದು ಬಂದ ಅಭಿಪ್ರಾಯಗಳನ್ನು ಪ್ರತ್ಯಕ್ಷಪ್ರಯೋಗದಿಂದ ಸ್ಥಿರಪಡಿಸಲು

ತಕ್ಕ ಉಪಕರಣಗಳಿರಲಿಲ್ಲ. ಭೌತಶಾಸ್ತ್ರ, ರಸಾಯನಶಾಸ್ತ್ರಗಳು ಪುಷ್ಟವಾಗಿ ರೂಪುಗೊಂಡಿರುವುದು ಕಳೆದ ಇನ್ನೂರು ಮುನ್ನೂರು ವರ್ಷಗಳಿಂದೀಚೆಗೆ. ಭೂಗ್ರಹದ ಆಕಾರವನ್ನೂ, ಚಲನೆಯನ್ನೂ, ಸೂರ್ಯಮಂಡಲ ಚಂದ್ರಮಂಡಲ ಮೊದಲಾದ ಜ್ಯೋತಿಃಕಾಯಗಳ ಗಾತ್ರ-ಸಂಚಾರಗಳನ್ನೂ ಗೊತ್ತುಮಾಡಿ ಒಂದು ಬಗೆಯ ಶೋಧನೆಯಿಂದ ದೊರೆತ ಸಿದ್ಧಾಂತವನ್ನು ಮತ್ತೊಂದು ರೀತಿ ದೊರೆತ ಸಿದ್ಧಾಂತದೊಡನೆ ತುಲನೆಮಾಡಿ ಪರಿಷ್ಕಾರಗೊಳಿಸಿ ಸತ್ಯಾಂಶವನ್ನು ನಿಷ್ಕೃಷ್ಟವಾಗಿ ಹೇಳುವ ಸೌಕರ್ಯಗಳು ಸಾವಿರಾರು ವರ್ಷಗಳ ಹಿಂದೆ ಇರಲಿಲ್ಲ. ಆಗಿನವರು ಏನಿದ್ದರೂ ಯಂತ್ರಸಹಾಯವಿಲ್ಲದ ಬರಿಯ ಕಣ್ಣಿನ ವರದಿಗಳ ಆಧಾರದ ಮೇಲೆ ತಾವು ಕುಳಿತಿದ್ದ ಕಡೆಯಿಂದಲೇ ಬುದ್ಧಿಶಕ್ತಿಯನ್ನುಪಯೋಗಿಸಿ ಕೇವಲ ಯುಕ್ತಿಯಿಂದ ಅನುಮಾನ ಮಾಡುತ್ತಿದ್ದವರು. ಆ ಕಾಲಕ್ಕೆ ಗತ್ಯಂತರವಿರಲಿಲ್ಲ. ಈ ಕಾರಣದಿಂದ ಪೃಥ್ವಿಯ ರಚನೆ, ಮಳೆ ಮೋಡಗಳ ರಚನೆ, ಹಗಲು ರಾತ್ರಿಗಳ ಕ್ರಮ, ಋತುಚಕ್ರ ಪರಿವರ್ತನೆ ಇವೇ ಮೊದಲಾದ ಭೌತವಿಚಾರಗಳಲ್ಲಿ ವೇದವು ಹೇಳಿರುವ ಮಾತುಗಳು ವರ್ಣನಾವೈಖರಿಯಲ್ಲಿ ಕವಿವಾಕ್ಯದಂತೆ ಸುಂದರವಾಗಿಯೂ ಯುಕ್ತಿಯಲ್ಲಿ ಚಮತ್ಕಾರಸಿದ್ಧಗಳಾಗಿ ಕುತೂಹಲಕರಗಳಾಗಿಯೂ ಕಿವಿಗೆ ಗಂಭೀರಭಾವ ಚೋದಕಗಳಾಗಿಯೂ ಇದ್ದರೂ ವಾಸ್ತವಾಂಶ ಪ್ರತಿಪಾದನೆಯಲ್ಲಿ ಯಥಾವತ್ತೆಂದು ಗ್ರಾಹ್ಯವಾಗಲಾರದು. ಒಟ್ಟಿನಲ್ಲಿ ವೇದದ ಭೌತವಿಚಾರಭಾಗ ಗೌಣವಾದದ್ದು. ಮುಖ್ಯವಾದದ್ದು ಅದರ ಅಧ್ಯಾತ್ಮವಿಚಾರಭಾಗ.

ಋಷಿಗಳು ಹುಡುಕುತ್ತಿದ್ದುದು ಅಧ್ಯಾತ್ಮತತ್ತ್ವವನ್ನು; ಭೌತತತ್ತ್ವವನ್ನಲ್ಲ. ಅವರು ಉಪಯೋಗಿಸಿದ್ದು ದೇಹದ ಕಣ್ಣನ್ನಲ್ಲ, ದೇಹದ ಒಳಗಡೆ ದೇಹಕ್ಕೆ ಅಂಟಿದ್ದಲ್ಲದೆ ಇರುವ ಆತ್ಮದ ಕಣ್ಣನ್ನು. ಈ ವಿಶೇಷಾಂಶವನ್ನು ವೇದೋಪಾಸಿಗಳು ಲಕ್ಷ್ಯದಲ್ಲಿಡುವುದು ತೀರಾ ಆವಶ್ಯಕ. ಏಕೆಂದರೆ ವೇದದ ಪ್ರಾಮಾಣ್ಯವು ವೇದದಲ್ಲಿಯೇ ಎಲ್ಲಾ ವಾಕ್ಯಗಳಿಗೂ ಏಕಮಾನದಲ್ಲಿ ಅನ್ವಯಿಸತಕ್ಕದ್ದಲ್ಲ. ವೇದದಲ್ಲಿ ಬಹುಭಾಗ ಭೌತ ವಿಚಾರಕ್ಕೆ ಸಂಬಂಧಪಟ್ಟದ್ದು. ಈ ಭೌತವಿಚಾರವನ್ನು ನಿತ್ಯವೆಂದೂ ಅಪೌರುಷೇಯವೆಂದೂ ವಾದಿಸಹೊರಟರೆ ನಮ್ಮ ವಿಚಾರಪ್ರಧಾನವಾದ ಯುಗದಲ್ಲಿ ಆ ವಾದಕ್ಕೆ ನಿಲ್ಲಲು ಕಾಲಿಲ್ಲದೆ ಹೋದೀತು. ಹಾಗೆ ವೇದವಾಙ್ಮಯದ ಒಂದು ಭಾಗಕ್ಕೆ ತಗಲಿದ ಬಾಧೆ ಇನ್ನೊಂದು ಭಾಗಕ್ಕೂ ಲೋಕದ ಭ್ರಾಂತಿ-ಪ್ರಮಾದಗಳ ಸಹಜತೆಯ ಕಾರಣದಿಂದ ತಗಲುವಂತಾದೀತು. ವೇದದ ಆಧ್ಯಾತ್ಮಿಕ ಬೋಧನೆಯನ್ನೇ ತಪ್ಪುತಪ್ಪಾಗಿ ಗ್ರಹಿಸಿದರೆ ಅದರಿಂದ ಮಾನವಲೋಕಕ್ಕೆಲ್ಲ ಒಂದು ದೊಡ್ಡ ನಷ್ಟವಾದೀತು. ವೇದದ ಭೌತಪ್ರಪಂಚಭಾಗದ ದೇಶ-ಕಾಲದ ಪರಿಮಿತತೆಯನ್ನು ನಾವು ಒಪ್ಪಿಕೊಂಡಷ್ಟೂ

ಅದರ ಆಧ್ಯಾತ್ಮಿಕಭಾಗದ ಸಾರ್ವತ್ರಿಕಪ್ರಾಮಾಣ್ಯವು ಮತ್ತಷ್ಟು ದೃಢಪಡುತ್ತದೆ. ಹೀಗೆ ಆಧ್ಯಾತ್ಮಿಕ ವಿಚಾರದ ವೇದಪ್ರಾಮಾಣ್ಯವನ್ನು ದೃಢವಾಗಿರಿಸುವುದು ಮಾನವಕ್ಷೇಮಕ್ಕೆ ಅವಶ್ಯಸಂಗತಿಯಾಗಿದೆ.

ಈ ಮೇಲಣ ವಿಚಾರಸರಣಿಯ ಫಲಿತಾಂಶವನ್ನು ಈಗ ಸಂಗ್ರಹಿಸಿ ಹೇಳಬಹುದು. ವೇದದ ಕರ್ಮಕಾಂಡಭಾಗವೂ ಭೌತವಿಚಾರಭಾಗವೂ ನಮ್ಮ ಪರೀಕ್ಷೆ-ಪರಿಷ್ಕರಣಗಳಿಗೆ ಮೇಲ್ಪಟ್ಟುವಲ್ಲ. ವೇದದ ಜ್ಞಾನಕಾಂಡಭಾಗವೂ ಅಧ್ಯಾತ್ಮ ವಿಚಾರಭಾಗವೂ ಮಾತ್ರ ಅತ್ಯಂತಾವಶ್ಯವಾದ ಸತ್ಯಸಾಕ್ಷ್ಯಗಳು.

ಯಾವ ಮತವನ್ನೂ ಜೀವನಕ್ರಮವನ್ನೂ ಲೋಕವು ಹಿಂದೂಧರ್ಮವೆಂದೂ ಆರ್ಯಸಂಸ್ಕೃತಿಯೆಂದೂ ಕರೆದಿದೆಯೋ ಆ ಮತದ ಸತ್ತ್ವವಿರುವುದು ವೇದದ ಆಧ್ಯಾತ್ಮಿಕಭಾಗದಲ್ಲಿ. ನಮ್ಮ ಜೀವನದ ಧ್ಯೇಯಗಳು, ನಮ್ಮ ಸಮಾಜದ ರಚನೆ, ನಮ್ಮ ನೀತಿಶಾಸ್ತ್ರ, ನಮ್ಮ ಸಭ್ಯವೃತ್ತಿ, ನಮ್ಮ ಕುಲಾಚಾರದ ಸಂಪ್ರದಾಯಗಳು, ನಮ್ಮ ಹಬ್ಬಹರಿದಿನಗಳು, ನಮ್ಮ ವ್ಯವಹಾರಸಂಕೇತಗಳು, ನಮ್ಮ ಲೋಕಮರ್ಯಾದೆ ಗಳು, ನಮ್ಮ ಜೀವನದ ಸಣ್ಣ ದೊಡ್ಡ ವ್ಯಾಪಾರಚರ್ಯೆಗಳು, ಯಾವದ್ವಿಶಿಷ್ಟವೂ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ವೇದಾಂತಸಿದ್ಧಾಂತವನ್ನು ಅವಲಂಬಿಸಿ ಕೊಂಡಿರುತ್ತವೆ. ಹೀಗೆ ನಮ್ಮ ಜೀವನಕ್ಕೆ ಒಂದು ಶಾಶ್ವತವೂ, ಅಬಾಧಿತವೂ ಆದ ಒಂದು ಆಧಾರಪೀಠವು ವೇದೋಪನಿಷತ್ಸಾಹಿತ್ಯದಲ್ಲಿ ಸಿದ್ಧವಾಗಿ ಕಾಣುತ್ತದೆ. ಇದು ಒಂದು ಜನತೆಯ ಜೀವನಕ್ಕೆ ಇರಬೇಕಾದ ಮೊದಲನೆಯ ಸಂಪತ್ತು. ಯಾವ ಜನದ ಜೀವನವರ್ತನೆಗೆ ಇಂಥ ನಿಷ್ಕೃಷ್ಟವೂ ಶಾಶ್ವತವೂ ಆದ ಆಧಾರಭೂಮಿಯು ಇಲ್ಲವೋ ಆ ಜನರಲ್ಲಿ ಒಂದು ದೃಢವಾದ ಸಂಸ್ಕೃತಿಗೆ ಅವಕಾಶವಾಗದು. ಅವರ ಗುರಿ ದೈಹಿಕಸಂಪತ್ತಿನ ಗುರಿಗಿಂತ ಮೇಲಿನದಾಗದು. ನಿತ್ಯನೂತನವೆನಿಸುವ ದೇಹಭೋಗ, ಅದಕ್ಕಾಗಿ ಅರ್ಥಸಂಪಾದನೆ, ಅದಕ್ಕಾಗಿ ಬಡಿದಾಟ; ಹೊಸ ಹೊಸ ಸುಖಭ್ರಾಂತಿ, ಹೊಸಹೊಸ ಭಾವೋದ್ರೇಕ, ಹೊಸಹೊಸ ಜೀವನವಿಕಾರ — ಇವು ಅಧ್ಯಾತ್ಮಚಿಂತೆಯಿಲ್ಲದ ಜನರ ಜೀವಿತದ ಲಕ್ಷಣ. ಮನುಷ್ಯಪ್ರಾಣಿ ಮೃಗಜಾತಿಗಿಂತ ಬೇರೆ ಎನ್ನಿಸುವಂತೆ ಮಾಡಿರುವುದು ಅವನಲ್ಲಿ ಯತ್ಕಿಂಚಿತ್ತಾದರೂ ಇರುವ ಆಧ್ಯಾತ್ಮಿಕವಾಸನೆ. "ನಾನು ಯಾರು? ಜಗತ್ತು ಯಾರದ್ದು? ನನ್ನ ಹುಟ್ಟು ಸಾರ್ಥಕ ವಾಗುವುದು ಹೇಗೆ?" ಎಂದು ಮನುಷ್ಯನು ಒಂದೊಂದು ಸಲವಾದರೂ ಕೇಳಿಕೊಳ್ಳು ತ್ತಾನೆ. ಆ ಪ್ರಶ್ನೆಗಳಿಗೆ ಸರ್ವಸಮರ್ಪಕವಾದ ಉತ್ತರವನ್ನು ಒದಗಿಸತಕ್ಕ ಪ್ರಯತ್ನವೇ ವೇದಾಂತದ್ದು. ಚಂಚಲವೂ ಕ್ಷಣಿಕವೂ ಆದ ಪ್ರಪಂಚದಲ್ಲಿ ನಿಶ್ಚಲವೂ, ನಿತ್ಯವೂ ಆದ ಜೀವಾಳ ಒಂದುಂಟು. ಅದೇ ಆತ್ಮವಸ್ತು. ಅದರ ಸ್ವರೂಪವನ್ನು ಗೋಚರಪಡಿಸಿ

ಕೊಂಡು ಆ ಜ್ಞಾನದ ಬೆಳಕಿಗೆ ಅನುಸಾರವಾಗಿ ಬದುಕುವ ಬದುಕೇ ಸಾರ್ಥಕವಾಗತಕ್ಕದ್ದು. ಯಾವುದು ಆತ್ಮಶ್ರೇಯಸ್ಸೋ ಅದೇ ನಿಜವಾದ ಶ್ರೇಯಸ್ಸು. ಲೋಕದ ಆಕರ್ಷಣೆಗಳು ನೂರಾರಿರುತ್ತವೆ. ಮನುಷ್ಯನ ಮನಸ್ಸಿಗೆ ಹತ್ತಾರು ಬಗೆಯ ಸುಖಗಳೂ, ಹತ್ತಾರು ಬಗೆಯ ಸಂಪತ್ತುಗಳೂ ಬೇಕೆನಿಸುತ್ತವೆ. ಅವುಗಳಲ್ಲಿ ಒಳ್ಳೆಯವು ಯಾವುವು? ಕೆಟ್ಟವು ಯಾವುವು? ಯಾವ ಯಾವ ಭೋಗವನ್ನೂ, ಯಾವ ಯಾವ ವೈಭವವನ್ನೂ ಎಷ್ಟೆಷ್ಟು ಮಾತ್ರ ಬಯಸುವುದು ಉಚಿತ? ಯಾವ ಯಾವ ದಾರಿಗಳಲ್ಲಿ ಸಾಧಿಸುವುದು ಹಿತಕರ? ಈ ಬಗೆಯ ಪ್ರಶ್ನೆಗಳಿಗೆ ಉತ್ತರಗಳನ್ನು ಕಂಡುಕೊಳ್ಳಬೇಕಾದರೆ ನಮ್ಮ ಆಶೆಗಳಲ್ಲಿ ಸರ್ವೋತ್ಕೃಷ್ಟವಾದದ್ದು ಯಾವುದು? ಒಳ್ಳೆಯದೆಂಬುದರಲ್ಲಿ ಉತ್ತಮೋತ್ತಮವಾದದ್ದು ಎಂಥಾದ್ದು? — ಎಂಬುದನ್ನು ಮೊದಲು ಕಂಡುಕೊಳ್ಳಬೇಕು. ಹಾಗೆ ಶ್ರೇಯಸ್ಸಿನ ಮೂಲವನ್ನೂ ಒಳ್ಳೆಯದೆಂಬುದರ ತಳಹದಿಯನ್ನೂ ನಮಗೆ ತೋರಿಸಿಕೊಡುವುದು ವೇದದ ಅಧ್ಯಾತ್ಮ ಜ್ಞಾನಭಾಗ.

ವೇದವು ಲೋಕಭೋಗವನ್ನೂ, ಐಶ್ವರ್ಯವನ್ನೂ ಬಿಡೆನ್ನುವುದೂ ಇಲ್ಲ, ಅದೇ ಜೀವನದ ಸರ್ವಸ್ವವೆಂದು ಸಾರುವುದೂ ಇಲ್ಲ. ಭೋಗೈಶ್ವರ್ಯಾಪೇಕ್ಷೆಯು ಪ್ರಾಣಿಗೆ ಪ್ರಕೃತಿಸಿದ್ಧವಾದದ್ದೆಂದೂ ಆ ಕಾರಣ ಅದನ್ನು ತ್ಯಜಿಸುವುದು ಸುಲಭವಲ್ಲವೆಂದೂ ವೇದವು ಗ್ರಹಿಸಿದೆ ಮತ್ತು ಆ ಸಹಜವಾದ ಅಪೇಕ್ಷೆಯನ್ನು ಕ್ರಮಕ್ರಮವಾಗಿ ಶಿಕ್ಷಿಸುವುದೇ ಅದನ್ನು ಅಧ್ಯಾತ್ಮಶ್ರೇಯಸ್ಸಿಗೆ ಅನುಕೂಲಪಡಿಸುವ ಉಪಾಯವೆಂದೂ ಕಂಡುಕೊಂಡಿದೆ. ನಮ್ಮ ಪುರುಷಾರ್ಥಗಳ ವ್ಯವಸ್ಥೆ ಈ ತತ್ತ್ವದ ಮೇಲೆಯೇ ಆಗಿರತಕ್ಕದ್ದು. ವೇದವು ದೇಹಸೌಖ್ಯವನ್ನು ಬೇಡವೆನ್ನುವುದಿಲ್ಲ: ಅದಕ್ಕೆ ಒಂದು ಮಿತವಾದ ಸ್ಥಾನವನ್ನು ಕೊಟ್ಟಿದೆ. ಆ ಸ್ಥಾನವನ್ನು ಮೀರಗೊಳಿಸುವುದಿಲ್ಲ. ಮನುಷ್ಯನು ಬಯಸಬಹುದಾದ ಬಯಕೆಗಳೆಲ್ಲವನ್ನೂ ನಾಲ್ಕು ಜಾತಿಗಳಾಗಿ ವಿಂಗಡಿಸಿದೆ. ಅವೇ ಧರ್ಮ, ಅರ್ಥ, ಕಾಮ, ಮೋಕ್ಷ. ಈ ನಾಲ್ಕೂ ಬೆಲೆಬಾಳತಕ್ಕವೇ. ಆದರೆ ಅವುಗಳ ಬೆಲೆಗಳಲ್ಲಿ ತಾರತಮ್ಯ ವಿವೇಕವುಂಟು. ಆತ್ಮದ ಪರಮ ಶ್ರೇಯಸ್ಸೇ ಮೋಕ್ಷ. ಅದಕ್ಕೆ ತಕ್ಕ ಜೀವಸಂಸ್ಕಾರವೇ ಧರ್ಮ. ಆ ಧರ್ಮಕ್ಕೆ ವಿರೋಧವಾಗದ ರೀತಿಯಲ್ಲಿ ಭುಜಿಸಲಾಗುವಂಥಾದ್ದು, ಹಾಗೆಯೇ ಪಡೆಯಲಾಗುವಂಥಾದ್ದು ಅರ್ಥ. ಹೀಗೆ ಮನುಷ್ಯನ ಸ್ವಾಭಾವಿಕವಾದ ಇಷ್ಟಾನಿಷ್ಟಗಳನ್ನು ವೇದಮತವು ಒಂದು ಸೋಪಾನ ಕ್ರಮದಲ್ಲಿ ಏರ್ಪಡಿಸಿದೆ. ಮನುಷ್ಯಜೀವವು ಯಾವ ಒಂದು ಮೆಟ್ಟಿಲನ್ನೂ ಮೆಟ್ಟೆನೆನ್ನಬೇಕಾದದ್ದಿಲ್ಲ; ಆದರೆ ತುದಿಯ ಮೆಟ್ಟಿಲಿನ ಯಾವ ಒಂದು ಮೆಟ್ಟಿಲನ್ನೂ ಅದೇ ಸರ್ವೋನ್ನತವೆಂದು ಗಣಿಸಬೇಕಾದದ್ದಿಲ್ಲ. ಅಂತರಾತ್ಮಶ್ರೇಯಸ್ಸಿನ ದೃಷ್ಟಿಯಿಂದ ಪ್ರಪಂಚಜೀವನದ ನಾನಾವಸ್ತುವಿಷಯಗಳಲ್ಲಿ ಒಂದು ಉಚ್ಚ-ನೀಚವ್ಯವಸ್ಥೆಯನ್ನು

ಗೊತ್ತುಮಾಡಲಾಗುವಂತೆ ಒಂದು ಶಾಶ್ವತವಾದ ಅಧ್ಯಾತ್ಮತತ್ತ್ವವನ್ನು ಒದಗಿಸಿ ಕೊಟ್ಟಿರುವುದು ವೇದದಿಂದ ಮಾನವಲೋಕಕ್ಕೆ ಆಗಿರುವ ಮಹೋಪಕಾರ.

ಒಳ್ಳೆಯದು; ವೇದದ ಅಧ್ಯಾತ್ಮತತ್ತ್ವವನ್ನು ಅವಲಂಬಿಸಿಕೊಂಡಲ್ಲವೆ ನಮ್ಮ ಸ್ಮೃತಿಗಳೂ ಆಚಾರಗಳೂ ಬೆಳೆದಿರುವುದು? ಈ ಧರ್ಮಶಾಸ್ತ್ರಗಳೂ ಸಮಯ-ಸಂಕೇತಗಳೂ, ನಮ್ಮ ಕೈಕಾಲು ಕಟ್ಟಿರಬೇಕೆ? ವೇದದ ಅಧ್ಯಾತ್ಮಬೋಧನೆಯನ್ನೂ ಕೂಡ ನಾವು ಪ್ರಶ್ನೆ-ಪರೀಕ್ಷೆಗಳಿಲ್ಲದೆ ಅದೇ ಎಂದೆಂದಿಗೂ ಸರಿಯೆಂದು ಒಪ್ಪಿಕೊಳ್ಳ ಬೇಕೆ? ಹೊಸ ಹೊಸ ವಿಜ್ಞಾನಶೋಧನೆಗಳೂ, ತತ್ತ್ವವಾದಗಳೂ ಹೊರಡು ತ್ತಿರುವ ಈ ಕಾಲದಲ್ಲಿ ವೇದಸಿದ್ಧಾಂತಗಳನ್ನು ನಾವು ಪುನಃಪರಿಶೋಧನೆಗೆ ಒಳಪಡಿಸಲಾಗದೆ? — ಎಂದು ಯಾರಾದರೂ ಕೇಳಬಹುದು. ಹಾಗೆ ಕೇಳುವುದರಲ್ಲಿ ತಪ್ಪಿಲ್ಲ. ಹೊಸ ಅನ್ವೇಷಣೆಯನ್ನೂ ಹೊಸ ಶೋಧನೆಯನ್ನೂ ವೇದವು ನಿಷೇಧಿಸಿಲ್ಲ. ಆದರೆ ಹೊಸ ನಿರ್ಣಯವು ಹಳೆಯ ನಿರ್ಣಯದ ವಿನಾಶವಾಗದೆ ಉತ್ತರಪರಿಣಾಮರೂಪವಾಗಬೇಕೆಂಬುದು ವೈದಿಕರ ಅಭಿಪ್ರಾಯ. ಮನುಷ್ಯಜೀವನವು ಅಖಂಡವಾದ ಏಕಧಾರೆಯಾಗಿರಬೇಕು. ಪೂರ್ವಘಟನೆಗೆ ಉತ್ತರಘಟನೆಯು ಅನುಸ್ಯೂತವಾದ ಸಂಬಂಧವುಳ್ಳದ್ದಾಗಿರಬೇಕು. ಒಂದು ಮಹಾವೃಕ್ಷದಲ್ಲಿ ಅದರ ತಾಯಿಬೇರು ಪುರಾತನವಾದದ್ದು. ಅದರ ಮೇಲಣ ಚಿಗುರು ಅತ್ಯಂತ ನೂತನವಾದದ್ದು. ಆ ಬೇರಿಗೂ ಆ ಚಿಗುರಿಗೂ ಎಂಥ ಸಂಬಂಧವುಂಟೋ ನಮ್ಮ ಆರ್ಷೇಯಕ್ಕೂ, ನಮ್ಮ ನವಸಂಸ್ಕೃತಿಗೂ ಅಂಥ ಸಂಬಂಧವಿರಬೇಕು. ಒಂದರ ರಸಪರಿಣಾಮವೇ ಇನ್ನೊಂದು. ಒಂದರ ಸಾರ್ಥಕತೆ ಇನ್ನೊಂದರಿಂದ. ಅವೆರಡೂ ವಿರೋಧಿಗಳಲ್ಲ; ಒಂದೇ ಕಾಂಡದ ಎರಡು ಕೊನೆಗಳು. ಒಂದು ಜನದ ಪ್ರಾಚೀನಸಂಸ್ಕೃತಿ ಹಾಗೂ ನವೀನವ್ಯವಸ್ಥೆಗಳು ಹಾಗೆ ಅಖಂಡವಾಗಿ ಇರಬೇಕು. ಬದಲಾಯಿಸುತ್ತಿರುವುದು ಕಾಲದ ಸ್ವಭಾವ; ಬದಲಾಯಿಸದೇ ಏಕರೂಪದಲ್ಲಿರು ವುದು ಆತ್ಮದ ಸ್ವಭಾವ. ಕಾಲ-ದೇಶಪರಿವರ್ತನೆಯಿಂದ ಆಗುವ ಬದಲಾವಣೆಗಳ ಕಾರಣಗಳಿಂದ ಶಾಶ್ವತವಾದ ಆತ್ಮಕ್ಕೆ ಹಾನಿಯಾಗದಂತೆ ನೋಡಿಕೊಳ್ಳಬೇಕೆಂಬುದೇ ವೇದಾಂತದ ಧರ್ಮಸೂತ್ರ.

ಒಂದು ತತ್ತ್ವಜ್ಞಾನದ ಸಂಪೂರ್ಣ ಫಲ ನಮಗೆ ದೊರೆಯಬೇಕಾದರೆ ಆ ತತ್ತ್ವ ನಮ್ಮ ಅನುದಿನದ ಜೀವನದಲ್ಲಿ ಕ್ಷಣಕ್ಷಣವೂ ಎಡೆಬಿಡದೆ ಬೆರೆಯುತ್ತಿರಬೇಕು. ನಮ್ಮ ದೇಹದ ನಾಳಗಳಲ್ಲಿ ರಕ್ತಚಲನೆಯೂ ನಮ್ಮ ಎದೆಯಲ್ಲಿ ನಾಡಿಯ ಮಿಡಿತವೂ ನಮ್ಮ ಮೂಗಿನ ಉಸಿರಾಟವೂ ಹೇಗೆ ನಮ್ಮ ಸಂಕಲ್ಪವನ್ನಪೇಕ್ಷಿಸದೆ, ನಮ್ಮ ಉದ್ದೇಶ ಪ್ರಯತ್ನಗಳಿಲ್ಲದೆ ಸ್ವತಂತ್ರವಾಗಿ ಸಂತತವಾಗಿ ನಡೆಯುತ್ತಿರುತ್ತವೆಯೋ, ನಮ್ಮ

ತತ್ತ್ವಜ್ಞಾನವೂ ಹಾಗೆ ನಮ್ಮ ದಿನಚರಿಯಲ್ಲಿ ತಾನೇ ತಾನಾಗಿ ಸಂತತವಾಗಿ ಸ್ವತಂತ್ರವಾಗಿ ರೂಪುಗೊಳ್ಳುತ್ತಿರಬೇಕು. ಹಾಗೆ ನಂಬಿಕೆ ನಡವಳಿಕೆಯಲ್ಲಿ ತಾನೇ ತಾನಾಗಿ ಹೋಗಬೇಕಾದರೆ ಮನಸ್ಸು ಆ ತತ್ತ್ವವನ್ನು ತನ್ನೊಳಕ್ಕೆ ಹೀರಿಕೊಂಡಿರಬೇಕು. ಹೀಗೆ ತತ್ತ್ವವನ್ನು ನಿತ್ಯಜೀವನದ ಅಂತರ್ಭಾಗವಾಗಿ ಮಾಡುವ ಧ್ಯಾನಕ್ರಿಯೆಯೇ ನಿದಿಧ್ಯಾಸನ. ಅದೇ ಅನುಸಂಧಾನ.

ಹೀಗೆ ಒಂದು ತತ್ತ್ವ ಅಭ್ಯಾಸಕ್ಕೆ ದೊರೆಯುತ್ತಿರಬೇಕಾದರೆ ಆ ತತ್ತ್ವವನ್ನು ಅಡಗಿಸಿಕೊಂಡಿರುವ ವಾಕ್ಯ ಮನಸ್ಸನ್ನು ಹಿಡಿದಿರಬೇಕು. ವಾಕ್ಯ ಮನಸ್ಸನ್ನು ಹಿಡಿಯುವುದು ಕಿವಿಯ ಮೂಲಕ. ಶ್ರೋತ್ರೇಂದ್ರಿಯವೇ ಮಹಾವಾಕ್ಯವು ಅಂತರಂಗವನ್ನು ಹೊಗಲು ಇರುವ ಹೆಬ್ಬಾಗಿಲು. ತತ್ತ್ವಬೋಧಕವಾದ ವಾಕ್ಯ ಮೊದಲು ಕಿವಿಯನ್ನು ಒಲಿಸಬೇಕು. ಹಾಗೆ ಕಿವಿಯನ್ನು ಒಲಿಸಿ ಅಂತರಂಗದೊಳಕ್ಕೆ ಪ್ರವೇಶವನ್ನು ಸಂಪಾದಿಸಬೇಕು. ಆ ತತ್ತ್ವ ಎಷ್ಟೇ ಗಂಭೀರವಾದದ್ದು ಆಗಿರಲಿ, ಅದರ ಪ್ರಯೋಜನಮಹತ್ತ್ವ ಎಷ್ಟರದೇ ಇರಲಿ — ಅದು ಕಾರ್ಯಕಾರಿಯಾಗಬೇಕಾದರೆ, ಅದಕ್ಕೆ ಶರೀರದಂತಿರುವ ವಾಕ್ಯಜಾಲವು ಶ್ರವಣಮೋಹಕವಾಗಿರಬೇಕು.

ಇದು ವೇದವಾಙ್ಮಯದ ರಚನೆಯ ಒಂದಾನೊಂದು ಮರ್ಮ. ವೇದಕವಿಗಳು ತಮ್ಮ ವಾಕ್ಯನ್ನು ಶ್ರುತಿಪ್ರಿಯವನ್ನಾಗಿ ಮಾಡುವುದರ ಆವಶ್ಯಕತೆಯನ್ನು ಮನಗಂಡು, ಎಲ್ಲ ಕಾವ್ಯದ ಬೆಡಗಿಗೂ ದಾರಿಯನ್ನು ತೋರಿಸಿಕೊಟ್ಟರು.

ಲೌಕಿಕ ಸಂಗತಿಗಳು ವೇದದಲ್ಲಿ ಬಂದಿರುವುದು

(೧) ಪ್ರಾಸಂಗಿಕವಾಗಿ, (೨) ದೃಷ್ಟಾಂತಕ್ಕಾಗಿ, (೩) ರೂಪಕಪ್ರಾಯವಾಗಿ.

ಉದಾಹರಣೆ: (೧) ಪ್ರಾಸಂಗಿಕವಾಗಿ —

**ಯಥಾ ಗಾಂಧಾರಾನ್**
**ಜನಕೋ ವೈದೇಹಃ**

(೨) ದೃಷ್ಟಾಂತವಾಗಿ —

**ವಾಯುರ್ವಾವ ಸಂವರ್ಗಃ**

(೩) ರೂಪಕಪ್ರಾಯವಾಗಿ —

**ಅಸೌ ವಾ ಆದಿತ್ಯೋ ದೇವಮಧು**
**ಅಹಂ ವೃಕ್ಷಸ್ಯ ರೇರಿವ**
**ಕೀರ್ತಿಃ ಪೃಷ್ಠಂ ಗಿರೇರಿವ**
**ಊರ್ಧ್ವ ಪವಿತ್ರೋ ವಾಜಿನೀವ**

ಹೀಗೆ ಪ್ರಾಸ್ತಾವಿಕವಾಗಿ ಬಂದಿರುವ ಲೌಕಿಕವಿಷಯಗಳಲ್ಲಿ ಪ್ರಕೃತಕಾಲದ ಶಾಸ್ತ್ರ ಸಿದ್ಧಾಂತಗಳಿಗೆ ಅಸಮ್ಮತಗಳಾದವೂ ಅಲ್ಲಲ್ಲಿದ್ದರೂ ಇರಬಹುದು. ಉದಾಹರಣೆಗೆ: ಛಾಂದೋಗ್ಯ ಶ್ರುತಿಯ (೪-೩-೧)

**ವಾಯುರ್ವಾವ ಸಂವರ್ಗಃ**

ಈ ವಾಕ್ಯವು ಇಂದಿನ ಭೌತಶಾಸ್ತ್ರಜ್ಞರಿಗೆ ಒಪ್ಪಿಗೆಯಾಗಲಾರದು. ಇಂಥ ಕಡೆಗಳಲ್ಲಿ ಆಧುನಿಕವಿಜ್ಞಾನವಾಕ್ಯಕ್ಕಿಂತ ವೇದವಾಕ್ಯ ಪ್ರಬಲವೆಂದು ವೈದಿಕರು ಹಠತೊಡ ಬೇಕಾಗಿಲ್ಲ. ಏಕೆಂದರೆ ವೇದದ ಮುಖ್ಯತಾತ್ಪರ್ಯವಿರುವುದು ಭೌತವಿಷಯದಲ್ಲಲ್ಲ, ಭೌತಾತೀತದಲ್ಲಿ.

ಜಗತ್ಸೃಷ್ಟಿಯ ಪ್ರಕರಣದಲ್ಲಿ ಒಂದು ಕಡೆ

**"ಆತ್ಮನ ಆಕಾಶಸ್ಸಂಭೂತಃ। ಆಕಾಶಾದ್ವಾಯುಃ। ವಾಯೋರಗ್ನಿಃ। ಅಗ್ನೇರಾಪಃ। ಅದ್ಭ್ಯಃ ಪೃಥಿವೀ..."** ಎಂದು ಹೇಳಿದೆ.

ಇನ್ನೊಂದು ಕಡೆ

**"ಅಗ್ರೇ ಇದಮಾಸನ್ ಸಲಿಲಮೇವ..."** ಇತ್ಯಾದಿಯಾಗಿ ಹೇಳಿದೆ. ಸೃಷ್ಟಿಕ್ರಮದಲ್ಲಿ ಮೊದಲು ಉತ್ಪತ್ತಿಯಾದದ್ದು ಬೆಂಕಿಯೆ, ನೀರೆ? ವೇದಾಂತಿಗೆ ಅದು ಹೇಗಾದರೂ ಒಂದೇ; ಅವೆರಡೂ ಅಲ್ಲದೆ ಡಾರ್ವಿನ್ನನೋ ಲಿನಿಯಸನೋ ಬೇರೊಬ್ಬನೋ ಹೇಳಿರುವುದೇ ಸೃಷ್ಟಿಕ್ರಮವಿಷಯದಲ್ಲಿ ಪ್ರಮಾಣವೆಂದು ಯಾರಾದರೂ ವಾದಿಸಿದರೂ ವೇದಾಂತಿ ಅದರಿಂದ ಅಲುಗಲಾರ. ಅವನ ಮುಖ್ಯವಿಷಯಕ್ಕೆ ಇವೆಲ್ಲ ಅಸಂಬದ್ಧಗಳು. ಈ ಶಾಸ್ತ್ರಗಳ ವಿಷಯ ಇಂದ್ರಿಯಾಧೀನ ವಸ್ತುಗಳು. ವೇದಾಂತವಾದರೋ ಇಂದ್ರಿಯಕ್ಕೆ ಸಿಕ್ಕದ ವಿಷಯವನ್ನು ಕುರಿತದ್ದು.

**ಪ್ರತ್ಯಕ್ಷೇಣಾನುಮಿತ್ಯಾ ವಾ**
**ಯಸ್ತೂಪಾಯೋ ನ ಬುದ್ಧ್ಯತೇ।**
**ಏತಂ ವಿದಂತಿ ವೇದೇನ**
**ತಸ್ಮಾದ್ವೇದಸ್ಯ ವೇದತಾ॥**

Physics, Chemistry, Biology, Geology, Astronomy — ಮೊದಲಾದವು ನೇತ್ರಾದಿ ಇಂದ್ರಿಯಗೋಚರಪ್ರಪಂಚಕ್ಕೆ ಸಂಬಂಧಪಟ್ಟವು. ಅಂಥ ಪ್ರತ್ಯಕ್ಷಪ್ರಮಾಣಗಳಿಂದಲೂ ಮತ್ತು ಆ ಪ್ರತ್ಯಕ್ಷ ಸಂಗತಿಗಳ ಆಧಾರದ ಮೇಲೆ

ಅವುಗಳ ವಿಮರ್ಶನೆಯಿಂದ ನಡೆದ ಊಹಾಪೋಹಾದಿ ಅನುಮಾನಗಳಿಂದಲೂ ಯಾವ ಸತ್ಯದರ್ಶನ ಮಾರ್ಗವನ್ನು ತಿಳಿಯಲಾಗುವುದಿಲ್ಲವೋ ಅದನ್ನು ವೇದದಿಂದ ತಿಳಿಯಲಾಗುತ್ತದೆ. ಆದರಿಂದಲೇ ವೇದದ ವೇದತ್ವ. ಅತೀಂದ್ರಿಯ ತತ್ತ್ವವನ್ನು ತಿಳಿಸಿಕೊಡಬಲ್ಲ ಶಾಸ್ತ್ರವೆಂದರೆ ವೇದ ಒಂದೇ. ವೇದವನ್ನು ಬಿಟ್ಟರೆ ಮತ್ತಾವ ಶಾಸ್ತ್ರವೂ ಅತೀಂದ್ರಿಯತತ್ತ್ವವನ್ನು ನಮಗೆ ತಿಳಿಯಪಡಿಸಲಾರದು.

ವೇದದ ಪ್ರಾಮಾಣ್ಯವನ್ನು ನಿರಾತಂಕವಾದದ್ದೆಂದೂ ಅದರ ಅಧಿಕಾರವನ್ನು ನಿರಂಕುಶವಾದದ್ದೆಂದೂ ನಾವು ಅಂಗೀಕರಿಸಿದ ಮೇಲೆ ನಮ್ಮ ಬುದ್ಧಿಸ್ವಾತಂತ್ರ್ಯವನ್ನು ನಾವಾಗಿ ಕಳಚಿ ಬಿಸುಟ ಹಾಗೆ ತಾನೆ? ವಾಸ್ತವವಾಗಿ ಈ ಸಂಶಯವು ಸಂಗತವಲ್ಲ. ವೇದವಾಕ್ಯವು ಪ್ರಮಾಣವಾದರೂ ಅದಕ್ಕೆ ಅರ್ಥವನ್ನು ಕಲ್ಪನೆಮಾಡುವ ಮತ್ತು ಅಂಥ ಅರ್ಥದಿಂದ ಹೊರಡುವ ಅಂತರ್ಭಾವಗಳನ್ನು ವ್ಯವಹಾರದಲ್ಲಿ ಪ್ರಯೋಗಕ್ಕೆ ತರುವ ಸ್ವಾತಂತ್ರ್ಯ ನಮಗೆ ಇದ್ದೇ ಇರುತ್ತದೆ. ಈ ಸ್ವಾತಂತ್ರ್ಯವಿರುವುದರಿಂದಲೇ ಶಂಕರ, ರಾಮಾನುಜ, ಮಧ್ವ ಮೊದಲಾದ ಭಾಷ್ಯಕಾರರುಗಳ, ಭಾಸ್ಕರ, ಸಾಯಣಾದಿ ವ್ಯಾಖ್ಯಾನಕಾರರುಗಳ ಮತಭೇದ, ವಾದಭೇದಗಳಿಗೆ ಅವಕಾಶ ವುಂಟಾಗಿರುತ್ತದೆ. ವೇದಾಕ್ಷರ ಋಷಿಗಳದು. ಅದಕ್ಕೆ ಟೀಕೆ ಮಾಡುವ ಯುಕ್ತಿ ನಮ್ಮದು. ವೇದವು ಮನುಷ್ಯನ ಬುದ್ಧಿಸ್ವಾತಂತ್ರ್ಯಕ್ಕೆ ನಿರೋಧವಲ್ಲ; ನಿಯಂತ್ರಣ. ನದಿಯ ಪ್ರವಾಹಕ್ಕೆ ದಡದಿಂದ ತಡೆಯಿಲ್ಲ; ದಡವಿದ್ದರೆ ಪ್ರವಾಹದ ಮಾರ್ಗವು ನಿಷ್ಕೃಷ್ಟವಾಗಿ ಅದರಿಂದ ಜನೋಪಕಾರವಾಗುವುದು ಸುಲಭವಾಗುತ್ತದೆ. ವೇದವು ಪೌರುಷಬುದ್ಧಿಪ್ರವಾಹಕ್ಕೆ ತಡೆಯಾಗದ ದಡದಂತಿರಬೇಕಾದದ್ದು. ವೇದದ ಎಲ್ಲೆಕಟ್ಟನ್ನು ಮುರಿಯದೆ ಮನುಷ್ಯಬುದ್ಧಿಯು ಪ್ರವೇಶಿಸಬೇಕು. ಇಂಥ ಸ್ವಾತಂತ್ರ್ಯ ದಿಂದ ಯದ್ವಾ-ತದ್ವಾಗತಿಯ ಅಪಾಯಗಳು ತಪ್ಪುತ್ತವೆ.

ಭರತಖಂಡದಲ್ಲಲ್ಲದೆ ಇನ್ನೆಲ್ಲಿಯಾದರೂ, ಸಂಸ್ಕೃತವಲ್ಲದೆ ಬೇರೆ ಭಾಷೆ ಯಲ್ಲಾದರೂ, ಪುರಾತನವಾದ ಆಧ್ಯಾತ್ಮಿಕ ಸಾಹಿತ್ಯವಿದ್ದಲ್ಲಿ ಅದನ್ನೂ ವೇದವೆಂದು ಕರೆಯಬಹುದೆ? ಆ ಸಾಹಿತ್ಯವು ಯಾರ ಮುಖದಿಂದ ಮೊದಲು ಹೊರಟು ಬಂದಿತೋ ಆ ಮಹಾನುಭಾವರು ನಿರ್ಮಲಹೃದಯರೂ, ಸೂಕ್ಷ್ಮದರ್ಶಿಗಳೂ ಮತ್ತು ಸತ್ಯೈಕನಿಷ್ಠರೂ ಆಗಿದ್ದರೆಂದು ನಮಗೆ ನಂಬುಗೆ ಇರುವ ಪಕ್ಷದಲ್ಲಿ — ಅವರವರ ಸುತ್ತಮುತ್ತಣ ಲೋಕವು ಅವರನ್ನು ಸತ್ಯವ್ರತರೆಂದೂ ಪರಿಶುದ್ಧರೆಂದೂ ಅಂಗೀಕರಿಸಿದ್ದ ಪಕ್ಷದಲ್ಲಿ, ಅವರ ವಾಕ್ಯನ್ನೂ ವೇದವೆಂದು ಪರಿಗಣಿಸಬಾರದೆಂದು ನಮ್ಮ ವೇದವಾಗಲಿ, ಸ್ಮೃತಿಗಳಾಗಲಿ ಹೇಳಿಲ್ಲ. ವೇದವೆಂದರೆ ಸತ್ಯವನ್ನು ಕುರಿತ ಜ್ಞಾನ, ಜಗದ್ರಹಸ್ಯ ತತ್ತ್ವವನ್ನು ಕುರಿತ ಜ್ಞಾನ, ಅಥವಾ ಸತ್ಯವಿಷಯಕ ಜ್ಞಾನ

ಎಂದು ಆಗಲೇ ನೋಡಿದ್ದಾಗಿದೆ. ಭೂಪ್ರಪಂಚದ ನಾನಾ ಪ್ರದೇಶಗಳ ಜನರಿಗೆ ಅವರವರ ಆಧ್ಯಾತ್ಮಿಕ ಕುತೂಹಲವಿದ್ದ ಮಟ್ಟಿಗೆ ಅವರವರ ಶ್ರದ್ಧೆ, ಬುದ್ಧಿಶಕ್ತಿಗಳಿಗನು ಸಾರವಾಗಿ ಅವರವರ ಸಂಸ್ಕಾರಕ್ಕೆ ತಕ್ಕಂತೆ ಜೀವೇಶ್ವರ ಸಂಬಂಧದ ತಿಳಿವಳಿಕೆ ಒಂದು ಪುರಾತನಗ್ರಂಥದಿಂದಲೋ, ಒಬ್ಬ ದೇವಾಂಶಪುರುಷನ ಉಪದೇಶವಾಕ್ಯ ದಿಂದಲೋ ಬಂದಿರುತ್ತದೆ. ಅದೇ ಮತವೆಂಬುದು. ಪ್ರಪಂಚದ ಎಲ್ಲಾ ಮತಗಳೂ ಯಾವುದೋ ಒಂದು ರೀತಿಯಲ್ಲಿ ದೈವಪ್ರಚೋದನೆಯ ಆಧಾರದ ಮೇಲೆ ನಿಂತಿರತಕ್ಕವೇ ಆದದ್ದರಿಂದ ವೇದವೆಂಬ ಹೆಸರು ಎಲ್ಲ ಮತಗಳ ಮೂಲಗ್ರಂಥ ಗಳಿಗೂ ಸಲ್ಲುತ್ತದೆ. 'ಜೆಂದ್ ಅವೆಸ್ತಾ' ಎಂಬುದು ಪಾರಸಿಕರ ವೇದ. 'ಓಲ್ಡ್ ಟೆಸ್ಟಮೆಂಟ್' 'ಟಾಲ್‌ಮಡ್' ಎಂಬ ಹೀಬ್ರೂ ಗ್ರಂಥಗಳು ಯಹೂದ್ಯರ ವೇದ. 'ಬೈಬಲ್' ಕ್ರಿಶ್ಚಿಯನ್ನರ ವೇದ. 'ಖುರಾನ್' ಮುಸಲ್ಮಾನರ ವೇದ. ಬೌದ್ಧರಿಗೆ 'ತ್ರಿಪಿಟಕಗಳು' ವೇದ.

ಒಂದು ಗ್ರಂಥಕ್ಕೆ ವೇದವೆಂದು ಹೆಸರು ಕೊಡುವುದರಲ್ಲಿ ಇರುವ ತೊಂದರೆ ಏನೆಂದರೆ ಆ ಹೆಸರಿನ ಮಹಿಮೆಗೆ ಜನಗಳು ವಶವಾಗಿ ಅದರ ಅಕ್ಷರಕ್ಷರವೂ, ಪದಪದವೂ ದೈವಚೋದಿತವಾದದ್ದೆಂದೂ, ಅಪ್ರತಿಮಪ್ರಮಾಣವೆಂದೂ ವಾದಿಸ ಹೊರಡುವುದು. ದೈವಚೋದನೆ ಇರುವುದು ಅಕ್ಷರ, ಪದಗಳಲ್ಲಲ್ಲ; ಗ್ರಂಥದ ತಾತ್ಪರ್ಯದಲ್ಲಿ. ತಾತ್ಪರ್ಯವನ್ನು ಕಂಡುಹಿಡಿಯತಕ್ಕದ್ದು ಮನುಷ್ಯಬುದ್ಧಿಯ ಕೆಲಸ. ಭೂಗೋಳಪುಸ್ತಕದ ಮುಂದೆ ಹರಡಿರುವ ನಕ್ಷೆಯಲ್ಲಿ (Map) ನೂರಾರು ಊರುಗಳ ಸ್ಥಳಗಳು ಗುರುತಾಗಿರುತ್ತವೆ. ತನಗೆ ಬೇಕಾದ ಊರನ್ನು ಹುಡುಕಿ ಕಂಡುಕೊಳ್ಳುವುದು ವಿದ್ಯಾರ್ಥಿಯ ಕೆಲಸ. ಅಡಿಗೆಯ ಕೋಣೆಗೆ ಸೇರಿದ ಉಗ್ರಾಣದಲ್ಲಿ ಸಂಭಾರದ್ರವ್ಯಗಳು ನೂರಾರಿರುತ್ತವೆ. ತನಗೆ ಬೇಕಾದ ಜಿನಸಿಯನ್ನು ಹುಡುಕಿ ತೆಗೆದುಕೊಳ್ಳುವುದು ಪಾಚಕನ ಕೆಲಸ. ಅದರಂತೆಯೇ ದೈವಪ್ರೇರಣೆಯಿಂದ ಒಬ್ಬ ಮಹಾಪುರುಷನ ಬಾಯಿಯ ಮೂಲಕ ಬಂದ ವಾಕ್ಕಿನಿಂದ ಬೋಧೆಯಾಗ ಬಹುದಾದ ಎರಡು ಮೂರು ಅರ್ಥಗಳಲ್ಲಿ ನಮ್ಮ ಪಾಲಿಗೆ ಸಮಂಜಸವಾಗ ಬಹುದಾದ್ದನ್ನು ವಿಮರ್ಶೆಯಿಂದ ಗೊತ್ತುಮಾಡಿಕೊಳ್ಳುವುದು ನಮ್ಮ ಬುದ್ಧಿಯ ಕೆಲಸ.

**ಈ ಪುಸ್ತಕಕ್ಕೆ ಅಧಿಕಾರಿ ಯಾರು?**

ಇದಕ್ಕಿಟ್ಟಿರುವ ಬೆಲೆಯಾದ ಕೆಲವು ಆಣೆಗಳು ಯಾರ ಕೈಲುಂಟೋ ಅವರು ಅಧಿಕಾರಿಗಳೆಂದು ಹೇಳಬಹುದೆ?

ಅಥವಾ ಇದರಲ್ಲಿರುವ ಅಕ್ಷರಗಳ ಮತ್ತು ಶಬ್ದಗಳ ಪರಿಚಯ ಯಾರಿಗುಂಟೋ

ಅಂಥವರು ಇದಕ್ಕೆ ಅಧಿಕಾರಿಗಳಾದಾರೆ? ಈ ಗ್ರಂಥವನ್ನೋದಬೇಕೆನ್ನುವವರಿಗೆ ಇರಬೇಕಾದ ಅಧಿಕಾರಸಂಪತ್ತಿನಲ್ಲಿ ಮೊಟ್ಟಮೊದಲನೆಯ ಅಂಶ ನೀತಿಸಂಸ್ಕಾರದ್ದು ಮತ್ತು ಮನಸ್ಸಿನ ಸಿದ್ಧತೆಯದು.

ಇದು ವೇದಾಂತಗ್ರಂಥ — ಎಂದರೆ ಬಾಹ್ಯಪ್ರಪಂಚಕ್ಕೆ ಸೇರದೆ ಹೊರಗಣ್ಣಿಗೆ ಕಾಣದೆ ಇರುವ ಜೀವೇಶ್ವರಸಂಬಂಧತತ್ತ್ವವನ್ನು ಕುರಿತ ಗ್ರಂಥ. ಇದನ್ನೋದ ಬೇಕೆನ್ನುವವರು ಒಂದು ನೀತಿನಿಷ್ಠೆಯನ್ನೂ, ಆತ್ಮಪರಿಶುದ್ಧತೆಯನ್ನೂ ಅಭ್ಯಾಸ ಮಾಡಿದವರಾಗಿರಬೇಕು. ಯಾರಿಗೆ ಆತ್ಮ, ಧರ್ಮ, ದೇವರು ಮೊದಲಾದ ವಿಷಯ ಗಳಲ್ಲಿ ಅಷ್ಟಿಷ್ಟಾದರೂ ಶ್ರದ್ಧೆಯುಂಟೋ — ಯಾರು ಇಹದಲ್ಲಿ ಅನುಭವಿಸುವ ಭೋಗಭಾಗ್ಯಗಳೇ ಜೀವನದ ಪರಮಸ್ವಾರಸ್ಯವಲ್ಲವೆಂದೂ, ಅದಕ್ಕಿಂತ ಆಳವಾದ ಸ್ವಾರಸ್ಯಾಂಶ ಬೇರೆ ಇರಬಹುದೆಂದೂ ನಂಬಿ ಹುಡುಕುತ್ತಿರುತ್ತಾರೆಯೋ, ಯಾರು ಕಾಮಕ್ರೋಧಗಳನ್ನೂ ಅಹಂಕಾರ-ಮಮಕಾರಗಳನ್ನೂ ಹದ್ದಿನಲ್ಲಿರಿಸುವ ಅಭ್ಯಾಸ ಕ್ಕಾಗಿ ಪ್ರಯತ್ನಮಾಡುತ್ತಿದ್ದಾರೆಯೋ ಅಂಥವರು ಈ ಗ್ರಂಥಕ್ಕೆ ಅಧಿಕಾರಿಗಳು.

ಈ ಗ್ರಂಥವು ವೇದದ ಒಂದು ಭಾಗಕ್ಕೆ ಸೇರಿದ್ದು. ವೇದವನ್ನು ಯಾರಿಗೆಂದರೆ ಅವರಿಗೆ ಕಲಿಸತಕ್ಕದ್ದಲ್ಲವೆಂದೂ, ಅದರ ಪಾಠಕ್ಕೆ ಯೋಗ್ಯತಾಸಿದ್ಧಿಯೊಂದು ಇರಬೇಕೆಂದೂ ವೇದದಲ್ಲಿ ವಿಧಿಸಿದೆ. ಆ ಯೋಗ್ಯತೆಯ ಮುಖ್ಯಾಂಶವು ಪಾಠಕನ ಮನೋಬುದ್ಧಿಗಳಿಗೆ ಆಗಿರುವ ಸಂಸ್ಕಾರದ್ದು. ಯಾಸ್ಕ-ನಿರುಕ್ತದಲ್ಲಿ (೨ : ೪) ಉದ್ಧೃತವಾಗಿರುವ ಪ್ರಾಚೀನೋಕ್ತಿ ಇದು:

**"ವಿದ್ಯಾ ಹ ವೈ ಬ್ರಾಹ್ಮಣಮಾಜಗಾಮ**
**ಗೋಪಾಯ ಮಾಂ ಶೇವಧಿಷ್ಟೇಽಹಮಸ್ಮಿ**
**ಅಸೂಯಕಾಯಾನೃಜವೇಽಯತಾಯ**
**ನ ಮಾ ಬ್ರೂಯಾ ವೀರ್ಯವತೀ ತಥಾ ಸ್ಯಾಮ್ ॥"**

**"ಯಮೇವ ವಿದ್ಯಾಃ ಶುಚಿಮಪ್ರಮತ್ತಂ**
**ಮೇಧಾವಿನಂ ಬ್ರಹ್ಮಚರ್ಯೋಪಪನ್ನಂ**
**ಯಸ್ತೇ ನ ದ್ರುಹ್ಯೇತ್ಕತಮಚ್ಚ ನಾಹ**
**ತಸ್ಮೈ ಮಾ ಬ್ರೂಯಾ ನಿಧಿಪಾಯ ಬ್ರಹ್ಮನ್ ॥"**

"ಎಲೈ ಬ್ರಾಹ್ಮಣನೇ, ನನ್ನನ್ನು ನೀನು ಅನಧಿಕಾರಿಗಳಿಗೆ ವಿಶದಪಡಿಸದೆ ಕಾಪಾಡಿಕೋ. ನಾನೇ ನಿನಗೆ ಒಂದು ಐಶ್ವರ್ಯನಿಧಿಯೋಪಾದಿಯಲ್ಲಿರುವೆನು. ಅಸೂಯಾಪರನಿಗೂ, ಸುಳ್ಳನಿಗೂ, ನೇಮನಿಷ್ಠೆಯಿಲ್ಲದವನಿಗೂ ನೀನು ನನ್ನನ್ನು ಕಲಿಸದಿದ್ದರೆ ನಾನು ನಿನಗೆ ಸಿದ್ಧಿಪ್ರದಳಾಗುತ್ತೇನೆ.

"ಎಲೈ ಬ್ರಾಹ್ಮಣನೇ! ಯಾರು ಶುಚಿವಂತನೋ ಅಜಾಗ್ರತೆ ಇಲ್ಲದವನೋ ಬುದ್ಧಿಶಕ್ತಿಯುಳ್ಳವನೋ ಬ್ರಹ್ಮಚರ್ಯವ್ರತವನ್ನು ಪಾಲಿಸಿರುವವನೋ ಮತ್ತು ನಿನಗೆ ದ್ರೋಹಮಾಡದವನೋ ಅಂಥ ಶಿಷ್ಯನಿಗೆ ಮಾತ್ರ ನನ್ನನ್ನು ಉಪದೇಶಿಸು. ಅವನು ನಿನ್ನ ಸರ್ವಸ್ವನಿಧಿಯನ್ನು ಚೆನ್ನಾಗಿ ಕಾಪಾಡಿಯಾನು".

ಇದನ್ನನುಸರಿಸಿಯೇ ಶ್ರೀಕೃಷ್ಣನು ಅರ್ಜುನನ್ನು ಎಚ್ಚರಿಸಿದ್ದು:

**"ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ।**
**ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋऽಭ್ಯಸೂಯತಿ॥"**

ಈ ಭಗವದ್ಗೀತೆಯನ್ನು ತಪಸ್ಸಿಲ್ಲದವನಿಗೂ ಭಕ್ತಿಯಿಲ್ಲದವನಿಗೂ, ಕುತೂಹಲ ವಿಶ್ವಾಸವಿಲ್ಲದವನಿಗೂ ಭಗವದ್ವಿಷಯದಲ್ಲಿ ದ್ವೇಷ-ಅಸಹನೆಗಳುಳ್ಳವನಿಗೂ ಹೇಳ ತಕ್ಕದ್ದಲ್ಲ.

ಪಾಶ್ಚಾತ್ಯದೇಶಗಳಲ್ಲಿ ತತ್ತ್ವಶಾಸ್ತ್ರ ಉಂಟಲ್ಲವೆ? ಅಲ್ಲಿಯ ಜನರು ತಮ್ಮ ಗ್ರಂಥಗಳನ್ನು ಪಾಠ ಹೇಳುವ ಪ್ರಸಂಗದಲ್ಲಿ ನಮ್ಮಂತೆ ತಡೆ, ಕಟ್ಟುಪಾಡುಗಳನ್ನಿಟ್ಟು ಕೊಂಡಿರುತ್ತಾರೆಯೆ? ಇಲ್ಲವಲ್ಲ! ಅವರ ತತ್ತ್ವಶಾಸ್ತ್ರಕ್ಕೂ, ವೈದಿಕತತ್ತ್ವಶಾಸ್ತ್ರಕ್ಕೂ ಒಂದು ಮೂಲಭೂತವಾದ ಭೇದವಿರುತ್ತದೆ. ಪಾಶ್ಚಾತ್ಯರ ತತ್ತ್ವಶಾಸ್ತ್ರವು ಕೇವಲ ಒಂದು ಬುದ್ಧಿವ್ಯಾಯಾಮ. ಅದು ಬರಿಯ ತರ್ಕದ ಕಸರತ್ತು (Exercise in logic) — ಕೇವಲವಾದ ಕೌಶಲ; ಗಣಿತಶಾಸ್ತ್ರ ಹೇಗೋ ಹಾಗೆ, ಚತುರಂಗದ ಆಟವು ಹೇಗೋ ಹಾಗೆ. ಪಾಶ್ಚಾತ್ಯರ ತತ್ತ್ವಶಾಸ್ತ್ರವು ಬುದ್ಧಿಕೌಶಲಪ್ರಧಾನವಾದದ್ದು. ಚತುರಂಗವಾಡುವವನು ಆ ಆಟದ ಕಟ್ಟುಪಾಡುಗಳಿಗೆ ಒಳಪಟ್ಟಿರಬೇಕೇ ಹೊರತು ತನ್ನ ಜೀವನದ ಮಿಕ್ಕ ಕ್ಷೇತ್ರಗಳಲ್ಲಿ ಅವನು ತನ್ನಿಷ್ಟದಂತೆ ಬದುಕಬಹುದು. ಬಂಧು ಮಿತ್ರರಲ್ಲಿ ನೀಚವೃತ್ತಿಯಿಂದ ನಡೆಯುವವನು ಗಣಿತದ ಗುಣಾಕಾರದಲ್ಲಿ ಸೂಕ್ಷ್ಮವೇತ್ತ ನಾಗಿರಬಹುದು. ಮೋಸಗಾರನೂ ಚತುರಂಗ ನಿಪುಣನಾಗಿರಬಹುದು. ಹಾಗೆಯೇ ಮನುಷ್ಯನ ಜೀವನವಿಧಾನಕ್ಕೂ ತತ್ತ್ವಶಾಸ್ತ್ರಕ್ಕೂ ಅವಶ್ಯವಾದ ನಿರ್ಬಂಧವೇನೂ ಇಲ್ಲವೆಂಬುದು ಪಾಶ್ಚಾತ್ಯರಲ್ಲಿ ಸಾಮಾನ್ಯವಾಗಿರುವ ರೂಢಿಯ ಅಭಿಪ್ರಾಯ.

ಭಾರತೀಯರ ತತ್ತ್ವವಿಚಾರಕ್ರಮ ಅಂಥದ್ದಲ್ಲ. ನಮ್ಮಲ್ಲಿ ತತ್ತ್ವದರ್ಶನಕ್ಕೆ ಅವಶ್ಯವಾದುದು ಬುದ್ಧಿಪರಿಶ್ರಮ ಮಾತ್ರವಲ್ಲ. ಸರ್ವೇಂದ್ರಿಯಗಳ ಸಹಕಾರವೂ ಅದಕ್ಕೆ ಬೇಕು. ತತ್ತ್ವಸಾಕ್ಷಾತ್ಕಾರವು ಸಮಸ್ತಜೀವನದ ಏಕಾಗ್ರ ಪ್ರಯತ್ನದ ಫಲ. ಭಗವತ್ತತ್ತ್ವವು ಅತ್ಯಂತಸೂಕ್ಷ್ಮವಾದ ವಿಷಯ. ಅದು ನಮ್ಮ ದುರ್ಬೀನು-ದೂರದರ್ಶಕಯಂತ್ರಗಳಿಗೂ, ನಮ್ಮ ತ್ರಾಸು ತಕ್ಕಡಿಗಳಿಗೂ, ಮೊಳ-ಗಜಕೋಲು ಗಳಿಗೂ ದೊರೆಯತಕ್ಕದ್ದಲ್ಲ. ಏಕೆಂದರೆ ಅದು ನಮ್ಮ ಇಂದ್ರಿಯಗಳಿಂದ

ದೂರವಾದದ್ದು — 'ಅತೀಂದ್ರಿಯ'. ಅದನ್ನು ನಾವು ಗ್ರಹಿಸಬೇಕೆಂದರೆ ಇಂದ್ರಿಯ ಗಳಿಗಿಂತ ಸೂಕ್ಷ್ಮವಾದ ಒಂದು ಸಾಧನವನ್ನು ಸಂಪಾದಿಸಿಕೊಳ್ಳಬೇಕು. ಆ ಸಾಧನವನ್ನು 'ಅಂತರ್ದೃಷ್ಟಿ' ಎಂದು ಕರೆಯಬಹುದು. ಅದನ್ನೇ ಶಾಸ್ತ್ರಗಳಲ್ಲಿ 'ಉಪಲಬ್ಧಿ' ಎಂದೂ, 'ಅವಗತಿ', 'ಪ್ರತಿಬೋಧ' ಎಂದೂ ಕರೆದಿರುವುದುಂಟು. ಅದು ನಮ್ಮ ಅಂತರಂಗದ ಒಳಗಡೆ ಯಾವ ಬಾಹ್ಯಸಂದರ್ಭವನ್ನೂ ಅವಲಂಬಿಸದೆ ನಮಗೆ ಉಂಟಾಗುವ ಒಂದು ಅನುಭವ — ಸ್ವಾನುಭೂತಿ.

ನಮ್ಮ ಬುದ್ಧಿಯನ್ನು ನಾನಾ ಮೋಹ-ಮಮತೆಗಳು, ನಾನಾ ರಾಗದ್ವೇಷಗಳು ಯಾವಾಗಲೂ ಹಿಡಿದುಕೊಂಡಿರುತ್ತವೆ. ಅವುಗಳಲ್ಲಿ ಎಷ್ಟೋ ಭಾಗ ನಮ್ಮ ತಿಳಿವಳಿಕೆಗೆ ಗೋಚರಿಸಿರುವುದಿಲ್ಲ. ನಮ್ಮ ಮನಸ್ಸಿನ ತಳದಲ್ಲಿ ಅವು ಗುಪ್ತವಾಗಿರು ತ್ತವೆ. ಅವುಗಳಿಂದ ಹೊರಡುವ ವಾಸನೆಗಳು ಮೋಡಗಟ್ಟಿ ನಮ್ಮ ಜೀವದ ಕಣ್ಣನ್ನು ಆವರಿಸಿರುತ್ತವೆ. ಈ ಮೋಡಗಳ ಪೊರೆಯನ್ನು ಹೋಗಲಾಡಿಸುವವರೆಗೂ ನಮ್ಮ ಕಣ್ಣು ನಿಜವಾದ ಬೆಳಕನ್ನು, ಪೂರ್ಣವಾದ ಬೆಳಕನ್ನು ಕಾಣಲಾರದು. ನಮಗೆ ಸಾಮಾನ್ಯವಾಗಿ ಕಾಣುವ ಬೆಳಕು ಸಂಜೆಮಬ್ಬಿನ ಬೆಳಕು, ಬಣ್ಣ ಬೆರೆತ ಬೆಳಕು. ಸರಿಯಾದ ತುಂಬುಬೆಳಕನ್ನು ಕಾಣಬೇಕೆನ್ನುವವನು ಮೊದಲು ತನ್ನ ಕಣ್ಣನ್ನು ಚೊಕ್ಕಟಪಡಿಸಿಕೊಳ್ಳಬೇಕು. ದೈವರಹಸ್ಯವು ಮೈಲಿಗೆಯ ಜೀವಕ್ಕೆ ಕಾಣಲಾರದು. ಜೀವವನ್ನು ತೊಳೆಯುವ ಕ್ರಮವೇ ವ್ರತ. ಅದೇ ಆತ್ಮಸಂಯಮ. ಅದೇ ಶೀಲಸದಾಚಾರಗಳು. ಅಂಥ ವ್ರತನಿಯಮವಿಲ್ಲದೆ ತತ್ತ್ವವಿಚಾರಕ್ಕೆ ಪ್ರವೇಶಿಸು ವವನು ಮಂಜುಗಣ್ಣಿನಿಂದ ಸೂಕ್ಷ್ಮರೇಖೆಯ ಚಿತ್ರಪಟದ ಮುಂದೆ ನಿಂತವನಂತೆ. ಕೇವಲ ಶಬ್ದಪಾಂಡಿತ್ಯದಿಂದಲೂ, ಬುದ್ಧಿಚಮತ್ಕೃತಿಯಿಂದಲೂ ವೇದರಹಸ್ಯವನ್ನು ಕಂಡುಕೊಳ್ಳುವೆನೆಂದು ಹೊರಡುವವನು ಧಾನ್ಯದ ಹೊಟ್ಟನ್ನು ತಿರುಳೆಂದು ಭಾವಿಸಿದವನು. ತಿರುಳು ಕಾಣಬೇಕೆನ್ನುವವನು ಅದನ್ನು ತರ್ಕಮೀಮಾಂಸಾದಿಶಾಸ್ತ್ರಗಳ ಜಲ್ಲಡಿಯಲ್ಲಿ ಶೋಧಿಸಬೇಕು. ಈ ಸಹಾಯವನ್ನು ತೆಗೆದುಕೊಳ್ಳದೆ ಇದ್ದಲ್ಲಿ ಅವನಿಗೆ ಸರಿಯಾದ ಅರ್ಥವು ಸ್ಫುರಿಸದೆ ಹೋಗುವುದು ಮಾತ್ರವಲ್ಲ, ಅಪಾರ್ಥಗಳು ತೋರಿ ಬರುವ ದುಸ್ಸಂಭವವೂ ಉಂಟು. ಇಂಗ್ಲಿಷ್ ಕವಿ ಮ್ಯಾಥ್ಯೂ ಆರ್ನಾಲ್ಡ್ ಎಂಬಾತನು ಒಂದು ಕಡೆ ಹೀಗೆ ಹೇಳಿದ್ದಾನೆ:

Some secrets may the poet tell,
For the world loves new ways.
To tell too deep ones is not well–
It knows not what he says.

**- *Obermann***

ಕವಿ ಸಾರಬಹುದು ಗೋಪ್ಯಗಳ ಕೆಲವನು ಮಾತ್ರ
ಲೋಕಕಾದರವುಂಟು ಹೊಸಸುದ್ದಿಗಳಲಿ.
ಬಹುಗೂಢತತ್ತ್ವಗಳನವನೊರೆವುದೊಳಿತಲ್ಲ
ಅವನ ನುಡಿಯಾಳಗಳನರಿಯಲಾರದದು.

ಅಸಂಸ್ಕೃತನ ತತ್ತ್ವವಿಚಾರವು ಎಳೆಯ ಹುಡುಗನ ಕೈಯ ಕತ್ತಿಯಂತೆ ಅನರ್ಥಕಾರಿಯಾದುದು. ಜನಕರಾಜನಲ್ಲಿದ್ದ ಶಿವಧನುಸ್ಸನ್ನು ರಾಮನು ಮುರಿದು ಸೀತೆಯನ್ನು ಪಡೆದುಕೊಂಡನು. ಇತರ ರಾಜಪುತ್ರರು ಅದೇ ಧನುಸ್ಸನ್ನೆತ್ತಹೊರಟು ತಾವೇ ಕೈಕಾಲು ಮುರಿದವರಾದರು. ಅಧಿಕಾರಸಂಪತ್ತಿಲ್ಲದವರ ಸಾಹಸದ ಪಾಡು ಅಷ್ಟೆ. ಈ ಕಾರಣದಿಂದಲೇ ವೇದವೇದಾಂತಗಳ ಪಾಠಕ್ಕೆ ಅಧಿಕಾರಭೇದವೆಂಬುದು ಅತಿಮುಖ್ಯವಾದ ಪೂರ್ವಸಂಗತಿಯಾಗಿದೆ.

ಹಾಗಾದರೆ ಐರೋಪ್ಯವಿದ್ವಾಂಸರು ವೇದಗಳನ್ನೋದಿ ಇಂಗ್ಲಿಷ್ ಮೊದಲಾದ ಭಾಷೆಗಳಿಗೆ ತರ್ಜುಮೆ ಮಾಡಿಲ್ಲವೆ? ಮೆಕ್ಡಾನಲ್, ಮ್ಯಾಕ್ಸ್‌ಮುಲರ್ ಮೊದಲಾದವರು ಯಾವ ವ್ರತ, ತಪಸ್ಸುಗಳನ್ನು ಮಾಡಿದ್ದರು? ಅವರ ಗ್ರಂಥಗಳು ಮಾನ್ಯವಲ್ಲವೆ? ಆ ಪಾಶ್ಚಾತ್ಯ ವಿದ್ವಾಂಸರ ತರ್ಜುಮೆ-ಟೀಕೆಗಳು ಮಾನ್ಯವೆಂಬುದು ದಿಟ. ಅವರ ಗ್ರಂಥಗಳಿಂದ ಎಷ್ಟೋ ಉಪಕಾರವಾಗಿದೆ ಎಂಬುದು ಮನಸಾರ ಒಪ್ಪಬೇಕಾದ ಮಾತು. ಅವರ ಲೇಖನಗಳಿಗೆ ಆ ದೊಡ್ಡ ಬೆಲೆ ಉಂಟಾಗಿರುವುದು ಅವರ ಭಾಷಾಪಾಂಡಿತ್ಯದ ಕಾರಣದಿಂದ ಮಾತ್ರವೇ ಅಲ್ಲ. ಅವರ ಭಕ್ತಿಶ್ರದ್ಧೆಗಳ ಕಾರಣವೂ ಅವರ ವಿದ್ವತ್ತೆಯ ಜೊತೆಗೆ ಸೇರಿಕೊಂಡಿರುತ್ತದೆ. ವಿದೇಶೀಯ ಪಂಡಿತರಲ್ಲಿ ಎಲ್ಲರ ಗ್ರಂಥಗಳೂ ಪ್ರಮಾಣಗಳಲ್ಲ. ಅವರಲ್ಲಿ ಅಪಾರ್ಥವನ್ನು ಕಲ್ಪನೆ ಮಾಡಿದವರೂ ಇದ್ದಾರೆ. ಸಾಧುವಾಗಿ ಅರ್ಥವಿವರಣೆ ಮಾಡಿರುವವರೂ ಇದ್ದಾರೆ. ಆದರೆ ಈ ಸಾಧುವಿವರಣೆ ಮಾಡಿರುವವರನ್ನೂ ಕೂಡ ನಾವು ತತ್ತ್ವಜ್ಞಾನಿಗಳು, ಬ್ರಹ್ಮವೇತ್ತರು ಎಂದು ಅಂಗೀಕರಿಸುವುದಕ್ಕೆ ಕಾರಣವಿಲ್ಲ. ಯಾವ ಒಂದು ಅಂತರಂಗಜ್ಯೋತಿಯನ್ನು 'ಪ್ರತ್ಯಗ್ದೃಷ್ಟಿ' ಎಂದೂ 'ಸಹಜಪ್ರೇಕ್ಷೆ' ಎಂದೂ ಕರೆಯುತ್ತೇವೆಯೋ ಅದೇ ವೇದಾಂತದಲ್ಲಿ ತತ್ತ್ವದ್ಯೋತಕವಾದ ಶಕ್ತಿ. ಆ ಅಂತಶ್ಶಕ್ತಿಯು ಪಾಶ್ಚಾತ್ಯಭಾಷಾಂತರಕಾರರಲ್ಲಿ ಸಂಸಿದ್ಧವಾಗಿತ್ತೆಂದು ಯಾರೂ ಹೇಳಲಾರರು. ನಮ್ಮಲ್ಲಿ ಸಹ ವೇದಾಂತಗ್ರಂಥವನ್ನು ಪಾಠ ಹೇಳುವವರೆಲ್ಲ ವೇದಾಂತಿಗಳೇನೂ ಅಲ್ಲ. ಪುಸ್ತಕದ ಉಪಾಧ್ಯಾಯನಿಗೆ ಅಂತಸ್ಸತ್ತ್ವದ ಅನುಭವ ಉಂಟೆಂಬ ನಿಶ್ಚಯವೇನೂ ಇಲ್ಲ. ಗ್ರಂಥವ್ಯಾಖ್ಯಾನವು ಶಬ್ದಪಾಂಡಿತ್ಯದ ವಿಕಾಸ — ವ್ಯಾಕರಣ, ನಿಘಂಟು, ತರ್ಕ, ಚಮತ್ಕಾರ, ವಾಗ್ಗುಂಫನ — ಇವುಗಳ ವ್ಯಾಪಾರ

ಅದು. ಪರತತ್ತ್ವವಾದರೋ ಅಂತರಂಗಾನುಭವದ ವಿಷಯ. ಬರಿಯ ವಾಕ್ಪಾಂಡಿತ್ಯ ಪ್ರದರ್ಶನಕ್ಕಾಗಿ ವೇದವನ್ನೋದಬೇಕೆನ್ನುವವರು ಒಂದು ಹಣ್ಣಿನ ಸ್ವಾರಸ್ಯವು ಅದರ ಸಿಪ್ಪೆಯ ಬಣ್ಣದಲ್ಲುಂಟೆಂದು ಭ್ರಮಿಸುವವರು. ಹಣ್ಣಿನ ಸಾರವಿರುವುದು ಒಳತಿರುಳಿನಲ್ಲಿ. ವೇದದ ಸಾರವಿರುವುದು ತತ್ತ್ವದರ್ಶನದಲ್ಲಿ. ಆ ದರ್ಶನಕ್ಕೆ ಬೇಕಾದದ್ದು ನಿರ್ಮಲವಾದ ಅಂತಶ್ಚಕ್ಷು. ಆ ಚಕ್ಷುನ್ನೈರ್ಮಲ್ಯಕ್ಕೆ ಸಾಧಕವಾದುವು ಬ್ರಹ್ಮಚರ್ಯಾದಿ ವ್ರತನಿಯಮಗಳು.

ವೇದವು ವಿದ್ಯಾರ್ಥಿಯಲ್ಲಿ ಬೇರೊಂದು ತರದ ಅರ್ಹತೆಯನ್ನಪೇಕ್ಷಿಸುತ್ತದೆ. ಅದು ಶ್ರದ್ಧೆ ಎಂಬುದು. ಶ್ರದ್ಧೆಯೆಂದರೆ ನಂಬಿಕೆ (ಸಂಸ್ಕೃತ ಪ್ರಯೋಗದಲ್ಲಿಯ ಅರ್ಥದಂತೆ), ವಿಶ್ವಾಸ. ಹಾಗಾದರೆ ವೇದವಿದ್ಯಾರ್ಥಿಗೆ ಇರಬೇಕಾದದ್ದು ವಿಚಾರಶೂನ್ಯವಾದ ಕುರುಡು ನಂಬಿಕೆಯೆ? ಅದಲ್ಲ. (ಈ ಪುಸ್ತಕದ ಪೀಠಿಕಾಭಾಗದಲ್ಲಿ ಆ ಪ್ರಸ್ತಾವ ಬಂದಿದೆ. ಶ್ರದ್ಧೆ ಮತ್ತು ತರ್ಕ — ಈ ಎರಡು ಜ್ಞಾನಮಾರ್ಗಗಳ ಪರೀಕ್ಷೆಯನ್ನು ಅಲ್ಲಿ ಮಾಡಿದೆ.) ವೇದವು ಬಯಸುವುದು ಒಂದು ವಿಶ್ವಾಸದ ಮನೋಭಾವವನ್ನು. ಚಿಕ್ಕ ವಯಸ್ಸಿನ ಹುಡುಗನಿಗೆ ತನ್ನ ತಂದೆಯಾಡುವ ಮಾತಿನಲ್ಲಿ ಎಂಥ ಪ್ರೀತಿ ನೈಜವಾಗಿರುತ್ತದೆಯೋ, ಅಂಥ ಮನೋಭಾವವಿಲ್ಲದಿದ್ದರೆ ವೇದಪಾಠದಿಂದ ಪ್ರಯೋಜನವಾಗಲಾರದು. ಈ ವಿಶ್ವಾಸದ ಮನೋಭಾವ ವೇದಪಾಠಕ್ಕೆ ಮಾತ್ರವೇ ಅಲ್ಲ, ಕಾವ್ಯಪಾಠಕ್ಕೂ ಅವಶ್ಯವಾದ ಪೂರ್ವಸಿದ್ಧತೆ. ಶಾಸ್ತ್ರಪಾಠಕ್ಕೂ ಸಹ ಅದು ಅವಶ್ಯ. ಪಾಠದ ಪ್ರಾರಂಭದಲ್ಲಿಯೇ ಉಪಾಧ್ಯಾಯನು ಸುಳ್ಳುಗಾರನೆಂದು ವಿದ್ಯಾರ್ಥಿಯ ಮನಸ್ಸಿನಲ್ಲಿ ಅಪನಂಬಿಕೆ ಇದ್ದರೆ ಆ ಉಪಾಧ್ಯಾಯನ ಮಾತು ಎಷ್ಟುಮಟ್ಟಿಗೆ ಪರಿಣಾಮಕಾರಿಯಾದೀತು? ಗುರುವಿನಲ್ಲಿ ಶಿಷ್ಯನಿಗೆ ಯತ್ಕಿಂಚಿತ್ ಆದರೂ ಗೌರವವಿರುವುದು ಪಾಠಸಾರ್ಥಕ್ಯಕ್ಕೆ ಅವಶ್ಯವಾದ ಸಂಗತಿ. ವೇದ ವಿದ್ಯಾರ್ಥಿಯು ವೇದವನ್ನು ಆಪ್ತವಾಕ್ಯವೆಂದು ಪರಿಗ್ರಹಿಸಬೇಕು. ಮಗುವಿಗೆ ರೋಗ ಬಂದಾಗ ಅಜ್ಜಿ ಔಷಧದ ಮಾತನ್ನು ಹೇಳುತ್ತಾಳೆ. ಆ ಔಷಧ ಆ ರೋಗಕ್ಕೆ ಹೊಂದತಕ್ಕದ್ದೋ ಅಲ್ಲವೋ ಅದು ಮುಂದಿನ ಅನುಭವದಿಂದ ತಿಳಿಯಬೇಕಾದದ್ದು. ಆದರೆ ಆಕೆಯ ಮಾತನ್ನು ವಂಚನೆಯದೆಂದಾಗಲಿ, ಅನುಭವದ ಆಧಾರವಿಲ್ಲದ್ದೆಂದಾಗಲಿ ಯಾರೂ ತಳ್ಳಿಹಾಕಲಾರರು. ಆ ಔಷಧವನ್ನು ಮಾಡಿನೋಡೋಣವೆಂಬ ಬುದ್ಧಿಯೇ ಎಲ್ಲರಲ್ಲೂ ಉದಯಿಸುತ್ತದೆ. ತಂದೆಯಾದವನು ಮಗನಿಗೆ ವೈದ್ಯವೃತ್ತಿ ಬೇಡ, ವಕೀಲವೃತ್ತಿ ಇರಲಿ ಎಂದು ಸಲಹೆ ಕೊಟ್ಟರೆ ಮಗನು ಆ ಸಲಹೆಯನ್ನು ದುರುದ್ದೇಶದ್ದೆಂದು ನಿರಾಕರಿಸುತ್ತಾನೆಯೆ? ಆ ಮಾತು ತನಗೆ ಮೊದಲು ಒಪ್ಪಿಗೆಯಾಗದಿದ್ದರೂ ಅವನು ಅದರಲ್ಲಿ ಯಾವುದೋ ಒಂದು ಉಚಿತವಾದ ಆಲೋಚನೆ ಇರಬೇಕೆಂದೇ ಗ್ರಹಿಸಿ

ಅದನ್ನು ಗೌರವದಿಂದ ವಿಮರ್ಶೆ ಮಾಡುತ್ತಾನೆ. ನಮಗೆ ಬಹುದಿನಗಳಿಂದ ಆಪ್ತಮಿತ್ರರಾಗಿರುವವರು ಕೊಡುವ ಹಿತಸೂಚನೆಗಳೂ ಸಹ ಎಷ್ಟೋ ಸಲ ನಮ್ಮ ಮನಸ್ಸಿಗೆ ಸರಿ ಎನಿಸುವುದಿಲ್ಲ ; ಆದರೆ ಆ ಮಿತ್ರರೆಲ್ಲಾ ನಮಗೆ ಗೂಢದ್ವೇಷಿಗಳೆನ್ನ ಬಹುದೆ? ಗುರುವಾಕ್ಯ, ವೇದವಾಕ್ಯಗಳ ವಿಷಯದಲ್ಲಿಯೂ ನಮಗಿರಬೇಕಾದ ಮನೋಭಾವ ಅಂಥಾದ್ದು. ಅಪರಿಚಿತರ ಮನಸ್ಸಿಗೆ ನಾವು ತೋರುವ ಉದಾಸೀನ ಭಾವವೂ, ದುರ್ಜನರ ಮಾತಿನ ವಿಷಯದಲ್ಲಿ ತೋರಿಸುವ ಶಂಕೆ ಸಂದೇಹಗಳೂ ಇಲ್ಲದೆ ಈ ಮಾತು ನಿಜವಿದ್ದೀತು. ಅದನ್ನಾಡುವವರಂತೂ ಅನುಭವಶಾಲಿಗಳು ಮತ್ತು ಹಿತಚಿಂತಕರು. ಆದದ್ದರಿಂದ ಅವರ ಮಾತು ವಿಚಾರ ಲಕ್ಷ್ಯಕ್ಕೆ ತಕ್ಕದ್ದು — ಎಂಬಿಷ್ಟು ಗೌರವವಿಶ್ವಾಸವನ್ನು (the will to believe) ವೇದ ವಿದ್ಯಾರ್ಥಿಯಾಗು ವವನು ಮೊದಲೇ ಇಟ್ಟುಕೊಂಡಿರಬೇಕು. ಆ ಶ್ರದ್ಧೆ ಸ್ನೇಹವನ್ನು ಬೆಳೆಸಬೇಕೆನ್ನು ವವನು ಅಪನಂಬಿಕೆಯಲ್ಲಿ ತಳಹದಿ ಹಾಕುವುದಿಲ್ಲ. ಒಬ್ಬ ಮನುಷ್ಯನಲ್ಲಿ ಕೆಟ್ಟದೆನ್ನು ವುದು ಉಂಟೆಂದು ರುಜುವಾತಾಗುವವರೆಗೂ ಅವನನ್ನು ದುಷ್ಟನೆನ್ನದೆ ಸಭ್ಯನೆಂದು ಗ್ರಹಿಸುವುದು ಹೇಗೆ ದೊಡ್ಡತನವೋ ಹಾಗೆಯೇ ಒಂದು ಗ್ರಂಥ ವ್ಯಾಸಂಗದಲ್ಲಿ ಅದನ್ನು ಆಪ್ತವಾಕ್ಯವೆಂದು ಗ್ರಹಿಸಿ ಪ್ರಾರಂಭಿಸುವುದು ಯೋಗ್ಯ ಮರ್ಯಾದೆ. ಅಂಥ ಮರ್ಯಾದೆ ಇದ್ದ ಹೊರತು ನಮಗೆ ಆ ಗ್ರಂಥದ ಗುಣ ಗೋಚರವಾಗಲಾರದು. ನಮ್ಮ ಸ್ವತಂತ್ರವಿಮರ್ಶೆ ವಿಚಾರಗಳನ್ನು ಉತ್ತರೋತ್ತರ ಮಾಡಿಕೊಳ್ಳಬಹುದು. ತಂದೆಯ ಮಾತಿಗೆ ಮಗನು ಆಗಾಗಲೇ ಅಲ್ಲಲ್ಲಿಯೇ ಎದುರು ಹೇಳುವುದಿಲ್ಲ. ತಂದೆಯ ಮಾತನ್ನು ಸಾವಧಾನವಾಗಿ ಪರಿಶೀಲಿಸಿ ಆ ಬಳಿಕ ತನಗೆ ಅಭಿಪ್ರಾಯ ಭೇದವೇನಾದರೂ ಇದ್ದರೆ ಅದನ್ನು ಆಚರಣೆಯ ಕಾಲದಲ್ಲಿ ಒಂದು ಮರ್ಯಾದೆ ಯಲ್ಲಿ ವ್ಯಕ್ತಪಡಿಸುತ್ತಾನೆ. ವೇದವಿಚಾರದಲ್ಲಿ ನಮಗೆ ಇರಬೇಕಾದ ಮನೋವೃತ್ತಿ ಅಂಥಾದ್ದು: ಸಂಭಾವಿತನಾದ ತಂದೆಯ ವಿಷಯದಲ್ಲಿ ಸುಸಂಸ್ಕೃತನಾದ ಮಗನಿಗೆ ಇರಬೇಕಾದದ್ದು.

ವೇದಪಾಠವು ವಿದ್ಯಾರ್ಥಿಯಲ್ಲಿ ಹೇಗೆ ಒಂದು ವ್ರತಾಚಾರನಿಷ್ಠೆಯನ್ನೂ, ಒಂದು ಆಪ್ತವಾಕ್ಯಶ್ರದ್ಧೆಯನ್ನೂ ಅಪೇಕ್ಷಿಸುತ್ತದೆಯೋ ಹಾಗೆಯೇ ಒಂದು ವಾಕ್ಸಾಮರ್ಥ್ಯ ವನ್ನೂ ಅಪೇಕ್ಷಿಸುತ್ತದೆ. ವೇದವಾಙ್ಮಯದಲ್ಲಿ ಮಹಾಪ್ರಾಣಾಕ್ಷರಗಳೂ ಕ್ಲಿಷ್ಟವಾದ ಸಂಯುಕ್ತಾಕ್ಷರಗಳೂ ಹೇರಳವಾಗಿ ಬರುತ್ತವೆ. ಇವುಗಳ ಉಚ್ಚಾರಣೆ ಎಲ್ಲರಿಗೂ ಸುಲಭವಲ್ಲ. ಅದು ಬಹುಕಾಲದ ಉಚ್ಚಾರಣಾಭ್ಯಾಸದಿಂದ ಬರಬೇಕಾದ ಶಕ್ತಿ. ಈ ಅಕ್ಷರೋಚ್ಚಾರಣೆಯ ಕಷ್ಟದ ಜೊತೆಗೆ ಅದಕ್ಕಿಂತ ಕಷ್ಟವಾದ ಉಚ್ಚಾರಣಧ್ವನಿಯ ಯೋಗ್ಯತೆ ಸೇರಿಕೊಂಡಿರುತ್ತದೆ. ವೇದಕ್ಕೆ ಒಂದು ಗಾನಕ್ರಮ ಗೊತ್ತಾಗಿದೆ. ಅದನ್ನು

ಹೇಗೆಂದರೆ ಹಾಗೆ ಹಾಡಲಾಗದು. ಸಂಗೀತದ ರಾಗವನ್ನು ಬದಲಾಯಿಸಿದಂತೆ ಅದನ್ನು ಬದಲಾಯಿಸಲಾಗದು. ಸಂಗೀತದ ರಾಗವಿನ್ಯಾಸದಲ್ಲಿ ಗಾಯಕನ ಮನೋ ಧರ್ಮಾನುಸಾರವಾಗಿ ಸ್ವರಯೋಜನೆ ಮಾಡಲಾಗುವಂತೆ ವೇದದಲ್ಲಿ ನವೀನ ಸ್ವರಕಲ್ಪನೆ ಮಾಡಲಾಗದು. ವೇದವಾಕ್ಯದ ಅರ್ಥಬೋಧೆಗೆ ಶಬ್ದಾಕ್ಷರವು ಹೇಗೆ ಮುಖ್ಯವೋ ಅಕ್ಷರಧ್ವನಿಯೂ ಹಾಗೆ ಮುಖ್ಯವಾದದ್ದು. ಆ ಧ್ವನಿಯು ಉದಾತ್ತ, ಅನುದಾತ್ತ ಮತ್ತು ಸ್ವರಿತ ಎಂದು ಸ್ಥೂಲವಾಗಿ ಮೂರು ಪ್ರಕಾರಗಳುಳ್ಳದ್ದು. ಈ ಸ್ವರಪಾಠಕ್ರಮವು ಸಂತತವಾಗಿ ಅನೂಚಾನವಾಗಿ ಬಂದಿರುತ್ತದೆ. ಪದರೂಪವಾದ ಭಾಷೆಗೆ ಹೇಗೆ ಒಂದು ಸಂಪ್ರದಾಯರೂಢಿಯ ಅರ್ಥವುಂಟೋ ಕಂಠಸ್ವರ ರೂಪವಾದ ಭಾಷೆಗೂ ಹಾಗೆ ಒಂದು ಸಂಪ್ರದಾಯಸಿದ್ಧವಾದ ಅರ್ಥವುಂಟು. ಸ್ವರವ್ಯತ್ಯಾಸದಿಂದ ಅರ್ಥವ್ಯತ್ಯಾಸವಾದೀತು. ಈ ಕಾರಣದಿಂದ ವೇದಾಧ್ಯಯನದಲ್ಲಿ ಅಕ್ಷರೋಚ್ಚಾರಣೆಯೂ ಸ್ವರಯೋಜನೆಯೂ ಆದಿಕಾಲದಿಂದ ನಿಷ್ಕರ್ಷೆಯಾಗಿ ನಿಂತಿವೆ. ಇದಕ್ಕೆ 'ಶಿಕ್ಷಾ' ಎಂದು ಹೆಸರು. ಅದಕ್ಕೆ ಭಂಗತಾರದೆ ಅಧ್ಯಯನ ಮಾಡಬೇಕೆನ್ನುವವನು ತನ್ನ ಕಂಠವನ್ನೂ ಉಚ್ಚಾರಣಾಂಗಗಳನ್ನೂ ಸಂಸ್ಕಾರಪಡಿಸಿ ಕೊಂಡಿರಬೇಕು.

ನಾವು ಮಾತನಾಡುವ ವೇಳೆಯಲ್ಲಿ ಉಪಯೋಗಿಸುವ ಮಾತುಗಳು ಬೇರೆ ಬೇರೆ ಸಂದರ್ಭಗಳಲ್ಲಿ ಅಕ್ಷರದೃಷ್ಟ್ಯಾ ಒಂದೇ ಆಗಿದ್ದಾಗ್ಯೂ ಕಂಠಧ್ವನಿಕಾರಣದಿಂದ ಅವು ಕೇಳುವವರಿಗೆ ಬೇರೆ ಬೇರೆ ಅರ್ಥವನ್ನು ಕೊಡತಕ್ಕುವಾಗುತ್ತವೆ. ಇದು ಎಲ್ಲರಿಗೂ ಅನುಭವದಲ್ಲಿರುವ ಸಂಗತಿ. ಒಬ್ಬ ಮನುಷ್ಯನು ತನ್ನ ಸ್ನೇಹಿತರೊಡನೆ ಇನ್ನಾರೋ ಒಬ್ಬನನ್ನು ಕುರಿತು ಮಾತನಾಡುತ್ತಾ, 'ಏನು ದೊಡ್ಡಮನುಷ್ಯನಯ್ಯಾ!' ಎಂದಾಗಲಿ 'ಏನು ಮಹಾಬುದ್ಧಿವಂತನಯ್ಯಾ!' ಎಂದಾಗಲಿ ನುಡಿದರೆ ಆ ಮಾತಿಗೆ ಮೂರು ಬೇರೆ ಬೇರೆ ಅರ್ಥವನ್ನು ಮಾಡಬಹುದು. ಅದು ನಿಶ್ಚಯಾರ್ಥಕವಾಗಬಹುದು, ಸಂದೇಹಾರ್ಥಕವಾಗಬಹುದು, ಹಾಸ್ಯಾರ್ಥಕವೂ ಆಗಬಹುದು. ಈ ಸ್ವರಬಲವನ್ನು ಇಂಗ್ಲಿಷ್‌ನಲ್ಲಿ ವರ್ಣದ್ದಾದರೆ Accent ಎಂದೂ ಪದದ್ದಾದರೆ 'ಎಂಫೆಸಿಸ್' ಎಂದೂ ಕರೆಯುತ್ತಾರೆ. ಇದೇ ವೇದೋಚ್ಚಾರಣೆಯ ಕ್ರಮವನ್ನು ಕಲಿಸುವ 'ಶಿಕ್ಷೆ' ಎಂಬ ಕಲೆಯ ಮೂಲಾಂಶ.

೧ ೨ ೩ ೪ ೫ ೬

**ವರ್ಣಃ ಸ್ವರಃ । ಮಾತ್ರಾ ಬಲಂ । ಸಾಮ ಸಂತಾನಃ ।**

(೧) ಅಕ್ಷರ (೨) ಸ್ವರ (೩) ಮಾತ್ರೆ ಎಂದರೆ ಹ್ರಸ್ವಶಬ್ದ (೪) ಸ್ವರಬಲ ಅಥವಾ

ಒಂದಕ್ಷರವನ್ನು ಉಚ್ಚರಿಸುವಲ್ಲಿ ಮಾಡುವ ಕಂಠಪ್ರಯತ್ನ ಅಥವಾ ಸ್ವರಭಾರ — ಉದಾತ್ತ, ಅನುದಾತ್ತ, ಸ್ವರಿತಗಳು (೫) ಧ್ವನಿಯಲ್ಲಿ ಸಮತೆ (೬) ಅಕ್ಷರಗಳನ್ನು ಒಂದಕ್ಕೊಂದು ಹೊಂದುಗೂಡಿಸಿ ಹೇಳುವುದು. ಈ ಆರು 'ಶಿಕ್ಷೆ'ಯ ಮುಖ್ಯಾಂಶಗಳು. ಇವು ವೇದವಾಕ್ಯದ ಸಮ್ಯಗರ್ಥನಿಷ್ಕರ್ಷೆಗೆ ಸಾಧಕಗಳಾದವು.

ಶ್ರೀಶಂಕರಾಚಾರ್ಯರು ಈ ರೀತಿ ಹೇಳಿದ್ದಾರೆ: "ಅರ್ಥಜ್ಞಾನಪ್ರಧಾನತ್ವಾತ್ ಉಪನಿಷದೋ ಗ್ರಂಥಪಾಠೇ ಯತ್ನೋಪರಮೋ ಮಾ ಭೂದಿತಿ ಶೀಕ್ಷಾಧ್ಯಾಯಃ." ವೇದಪಾಠದ ವಿಧಾನವನ್ನು ನಿಷ್ಕರ್ಷೆ ಮಾಡುವಲ್ಲಿ — ಎಂದರೆ ಒಂದನೆಯದಾಗಿ ವರ್ಣಸಂಯೋಜನೆಯಲ್ಲಿಯೂ, ಎರಡನೆಯದಾಗಿ ಪದಪ್ರಯೋಗದಲ್ಲಿಯೂ, ಮೂರನೆಯದಾಗಿ ಸ್ವರಮಾತ್ರಾವಿನ್ಯಾಸದಲ್ಲಿಯೂ — ಮಹರ್ಷಿಗಳು ಒಂದು ಮಹೋದ್ದೇಶವನ್ನು ಇಟ್ಟುಕೊಂಡಿದ್ದರು. ಅದು ವೇದವಾಕ್ಯವು ಶ್ರೋತೃವಿನ ಶ್ರವಣೇಂದ್ರಿಯವನ್ನು ಸ್ವಾಧೀನಮಾಡಿಕೊಂಡು ಆ ಮೂಲಕ ಅವನ ಮನಸ್ಸಿನ ಮೇಲೆ ಒಂದು ಮಹತ್ಪರಿಣಾಮವನ್ನುಂಟುಮಾಡಬೇಕೆಂಬುದು. ಅದೇ ವೇದಗಾನದ ಮಹಾಗುಣ. ಅದು ಕಿವಿಯನ್ನು ಮುಟ್ಟಿದ ಕೂಡಲೇ ಗಂಭೀರಭಾವವನ್ನು ತಾಳಿ ಮನಸ್ಸನ್ನು ಒಂದು ಉದಾತ್ತತೆಯೆಡೆಗೆ ಒಯ್ಯುತ್ತದೆ.

ಸಂಗೀತ ಕೂಡ ಅಂಥ ಕೆಲಸವನ್ನೇ ಮಾಡುತ್ತದೆ. ಆದರೆ ಸಂಗೀತವು ಮನಸ್ಸಿನಲ್ಲಿ ಕೆರಳಿಸುವ ಭಾವಗಳು ನೂರಾರು ತೆರದವು. ಅವು ಮುಖ್ಯವಾಗಿ ಮಾನುಷಲೋಕದ ಮತ್ತು ಮಾನುಷವ್ಯಾಪಾರಗಳ ಶೃಂಗಾರಾದಿಲೌಕಿಕ ರಸಭಾವಗಳನ್ನು ಉದ್ರೇಕಪಡಿಸುತ್ತವೆ. ವೇದದ ವಿಷಯವಾದರೋ ಅತಿಮಾನುಷವಾದದ್ದು. ಅದು ಎಬ್ಬಿಸ ಬಯಸುವ ಭಾವಗಳು ಲೋಕಾತೀತದ ಕಡೆಯವು. ವೇದದ ಎಲ್ಲ ಪ್ರಯತ್ನವೂ ಅತ್ಯಂತಪವಿತ್ರವೂ ಗಹನವೂ ಗಂಭೀರವೂ ಆದದ್ದು. ಆದದ್ದರಿಂದ ವೇದದ ಪರಮೋದ್ದೇಶವನ್ನು ಸಂರಕ್ಷಿಸಬೇಕಾದರೆ ಅದರ ಉಚ್ಚಾರಣ, ವಿನಿಯೋಗ ಕ್ರಮಗಳನ್ನು ಲೋಕಸಾಮಾನ್ಯದ ಅಧೀನಕ್ಕೆ ಬಿಡದೆ, ಒಂದು ನಿಷ್ಕೃಷ್ಟವಿಧಾನದಲ್ಲಿ ನಿಲ್ಲಿಸಿರುವುದು ಆವಶ್ಯಕ. ಈ ಕಾರಣದಿಂದಲೂ 'ಶಿಕ್ಷಾ' ವಿಧಿಯು ವೇದಶ್ರದ್ಧೆಯುಳ್ಳವರಿಗೆ ಸನ್ಮಾನ್ಯವಾಗಿದೆ.

# ೪. ವೇದದ ವಿಷಯಸಾಮಗ್ರಿ

ವೇದಗ್ರಂಥದ ವಿಷಯವು ಜಗದ್ರಹಸ್ಯವೆಂದು ಮೇಲೆ ಹೇಳಿದೆ. ಆ ರಹಸ್ಯವು ಮೂರು ಅಂಶಗಳನ್ನೊಳಗೊಂಡದ್ದು:

(೧) "ನಾನು", "ನಾನು" ಎಂದು ಹೇಳಿಕೊಳ್ಳುವ ಮನುಷ್ಯಪ್ರಾಣಿ.

(೨) ಆ ಮನುಷ್ಯನು ನೋಡಿ ಅನುಭವಿಸುವ ಲೋಕ.

(೩) ಅವನಿಗೂ ಆ ಲೋಕಕ್ಕೂ ಸಂಬಂಧವನ್ನು ಉಂಟಾಗಿಸಿ ಇಬ್ಬರಿಗೂ ಆಧಾರ ಭೂಮಿಯಾಗಿರುವ ವಸ್ತು ಬೇರೆ ಒಂದು ಇದ್ದರೆ ಆ ಮೂರನೆಯ ವಸ್ತು.

ಈ ಮೂರು — ಜೀವ, ಜಗತ್ತು, ಈಶ್ವರ — ಇವು ಮನುಷ್ಯನು ತಿಳಿಯ ಬಯಸುವ ರಹಸ್ಯಾಂಶಗಳು. ತನ್ನ ಬಾಳೂ ತನ್ನ ನಡವಳಿಕೆಯೂ ಆ ರಹಸ್ಯದ ತತ್ತ್ವಕ್ಕನುಸಾರವಾಗಿದ್ದರೆ ಅದರಿಂದ ತನಗೆ ಹಿತಸಿದ್ಧಿ ಎಂಬುದನ್ನು ಮನುಷ್ಯಬುದ್ಧಿ ಕಂಡುಕೊಂಡಿದೆ. ಆ ಗೂಢತತ್ತ್ವದ ನಿರೂಪಣೆಯೇ ವೇದದ ಮುಖ್ಯತಾತ್ಪರ್ಯ. ಆ ತತ್ತ್ವವನ್ನು ಕಂಡುಕೊಂಡವರೇ ಋಷಿಗಳು. 'ಋಷಿ' ಎಂದರೆ ಗುರಿಯನ್ನು ಮುಟ್ಟಿದಾತನು — ಬೇಕಾದದ್ದನ್ನು ಪಡೆದಾತನು (ಋ-ಗತೌ).

ವೇದರಚನೆ ಯಾವ ಕಾಲದಲ್ಲೇ ಆಗಿರಲಿ, ಯಾವ ದೇಶದಲ್ಲೇ ಆಗಿರಲಿ, ಅದರ ರಚನೆಯ ಕಾಲದ ಮತ್ತು ಪ್ರದೇಶದ ಕೆಲವು ಸಂಗತಿಗಳು ಯಾವ ಕಾಲದೇಶಾದಿ ಉಪಾಧಿಗೂ ಸಿಕ್ಕದಿರುವ ಜಗತ್ತತ್ತ್ವವನ್ನು ನಿರೂಪಿಸುವ ವಾಕ್ಯಗಳೊಡನೆ ಸ್ವಾಭಾವಿಕವಾಗಿ ಅಷ್ಟಿಷ್ಟು ಅಂಟಿಕೊಂಡು ಬಂದಿರುತ್ತವೆ. ಹೀಗೆ ನಕ್ಷತ್ರ-ಗ್ರಹಗಳ ಸ್ಥಾನನಿರ್ದೇಶವೂ, ಋತುವಾತಾವರಣಕಥೆಯೂ, ಗಿರಿನದೀವನಗಳ ಪ್ರಸಕ್ತಿಯೂ, ಜನಜೀವನವಿಧಾನದ ಚಿತ್ರಣವೂ ಸಹ ವಿಸ್ತಾರವಾದ ವೇದಗ್ರಂಥದಲ್ಲಿ ಅಲ್ಲಲ್ಲಿ ದೊರೆಯುತ್ತವೆ. ಇಂಥ ವಾಕ್ಯಗಳನ್ನು ನೋಡಿ ಭೂಗೋಲಶಾಸ್ತ್ರಜ್ಞರೂ, ಖಗೋಲ ಶಾಸ್ತ್ರಜ್ಞರೂ, ಸಮಾಜಲಕ್ಷಣ ಶಾಸ್ತ್ರಜ್ಞರೂ, ದೇಶಚರಿತ್ರಕಾರರೂ ವೇದವನ್ನು ತಮ್ಮ ತಮ್ಮ ಶಾಸ್ತ್ರಗಳ ಆಕರಗ್ರಂಥವೆಂಬಂತೆ ಉಪಯೋಗಪಡಿಸಿಕೊಂಡಿರುವುದುಂಟು. ಇದರಲ್ಲಿ ದೋಷವೇನೂ ಇಲ್ಲವಾದರೂ ವೇದದ ಮುಖ್ಯೋದ್ದೇಶವು ಈ ನಾನಾ ಲೌಕಿಕ ಶಾಸ್ತ್ರಗಳಿಗೆ ಸಾಮಗ್ರಿಯನ್ನೊದಗಿಸುವುದಲ್ಲ. ವೇದದಲ್ಲಿ ಕಾಣಬರುವ ಕಾಲ ದೇಶ ಪ್ರಸ್ತಾವಗಳು ಕೇವಲ ಪ್ರಾಸಂಗಿಕವಾದವು. ವೇದಕ್ಕೆ ಬೆಲೆ ಇರುವುದು ಅವುಗಳ ಕಾರಣದಿಂದಲ್ಲ. ವೇದದ ಪ್ರಾಶಸ್ತ್ಯಕ್ಕೆ ಕಾರಣ ಅದರ ಲೋಕಾತೀತ ವಿಷಯ ನಿಷ್ಠೆ.

ವೇದವು ತನ್ನ ಮತಕ್ಕೆ ಪೀಠಿಕೆಯಾಗಿ ಎರಡು ಪ್ರತಿಜ್ಞೆಗಳನ್ನಿರಿಸಿಕೊಂಡಿದೆ:

(೧) ಲೋಕಮೂಲವೂ, ಲೋಕಚಾಲಕವೂ ಹಾಗೆಯೇ ಲೋಕಾತೀತವೂ ಆದ ವಸ್ತುವೊಂದುಂಟು; ಅದೇ ಪರಮಸತ್ಯ. ಅದೇ ಪರತತ್ತ್ವ, ಪರಮಾತ್ಮ, ಪರಬ್ರಹ್ಮ, ದೇವರು, ಈಶ್ವರ, ಸ್ವಾಮಿ, ಭಗವಂತ.

(೨) ಆ ಪರತತ್ತ್ವ ಕೇವಲ ಲೌಕಿಕ ವಸ್ತುಗಳಿಗೆ ಪ್ರಯುಕ್ತವಾಗುವ ಪರೀಕ್ಷೆ, ಪ್ರಮಾಣಗಳಿಗೆ ದೊರೆಯತಕ್ಕದ್ದಲ್ಲ. ಅದನ್ನು ಕಾಣುವ ದಾರಿಗಳು ಬೇರೆ. ಅವು ಋಷಿವಾಕ್ಯದಿಂದಲೇ ತಿಳಿಯಲಾಗತಕ್ಕವು.

ಲೋಕವೆಂದರೆ ಮನುಷ್ಯನ ಕಣ್ಣು, ಕಿವಿ, ಮೂಗು, ನಾಲಿಗೆ, ತೊಗಲುಗಳೆಂಬ ಪಂಚೇಂದ್ರಿಯಗಳ ದ್ವಾರಾ ಅವನಿಗೆ ಗೋಚರವಾಗುವ ನಾನಾರೂಪ, ನಾನಾ ವರ್ಣ, ನಾನಾಧ್ವನಿ, ನಾನಾಶಕ್ತಿ, ನಾನಾವಸ್ತುಗಳ ಸಮುದಾಯ. ಈ ಬಹಿಷ್ಪ್ರಪಂಚದ ಅನುಭವಗಳನ್ನು ಇಂದ್ರಿಯಗಳ ಮೂಲಕ ಸಂಪಾದಿಸಿಕೊಂಡು ಒಟ್ಟುಗೂಡಿಸುವ ಅಂತಶ್ಶಕ್ತಿಯೇ ಮನಸ್ಸು. ಮನಸ್ಸೂ ಒಂದು ಇಂದ್ರಿಯವೇ. ಅದನ್ನು ಅಧೀಂದ್ರಿಯ ವೆಂದು ಇಟ್ಟುಕೊಳ್ಳೋಣ. ಆ ಅಧೀಂದ್ರಿಯವು ಇತರೇಂದ್ರಿಯಗಳ ಅನುಭವಗಳ ಆಧಾರದ ಮೇಲೆ ತಾನೇ ಊಹೆ ಉತ್ಪ್ರೇಕ್ಷೆಗಳಿಂದ ಬೇರೆ ಪ್ರಪಂಚವನ್ನು ಕಲ್ಪಿಸಿಕೊಳ್ಳುವುದುಂಟು. ಈ ಮನಃಕಲ್ಪನೆಯೂ ಲೋಕದ ಅಂಶವೇ. ಯಾವ ಯಾವ ವಿಷಯವು ಮನುಷ್ಯನಿಗೆ ತನ್ನಿಂದ ಅದು ಬೇರೆಯೆಂಬಂತೆ ತೋರಿಬಂದು, ಅವನ ಪರೀಕ್ಷೆ—ವಿಚಾರಣೆಗಳಿಗೆ ಒಳಪಡುವುದಾಗುತ್ತದೆಯೋ ಅದೆಲ್ಲವೂ ಲೋಕವೇ. ಒಟ್ಟಿನಲ್ಲಿ, ಇಂದ್ರಿಯಗ್ರಾಹ್ಯವಾದದ್ದು ಲೋಕ; ಲೋಕಗ್ರಹಣಕ್ಕಾಗಿ ಇರುವ ಸಾಧನ ಇಂದ್ರಿಯ.

ಜಗದ್ರಹಸ್ಯವಾದರೋ ಜಗತ್ತಿಗಿಂತ ಮಹತ್ತರವಾದುದು ಮತ್ತು ಸೂಕ್ಷ್ಮವಾದದ್ದು. ಹಾಗಿರಲಾಗಿ, ಜಗತ್ತನ್ನು ಹಿಡಿದು ಬಿಡಿಸಿ ಅಳೆದು ತಿಳಿಯಲು ಒದಗುವ ಸಾಧನಗಳು ಆ ರಹಸ್ಯ ತತ್ತ್ವವನ್ನು ಹಿಡಿದು ನೋಡಲು ಸಾಕಾಗಲಾರವು.

ಲೋಕವು ಮಿತವಾದದ್ದು: ಎಂದರೆ ಅಳತೆಗೊಳಪಟ್ಟದ್ದು, ಮೇಯವಾದದ್ದು. ಈ ಲೋಕವನ್ನು ಯಾವುದು ಆವರಿಸಿಕೊಂಡು — ಅಂತರಿಕ್ಷವು ಮೋಡವನ್ನಿರಿಸಿ ಕೊಂಡಿರುವಂತೆ — ತನ್ನೊಳಗಡೆ ಇರಿಸಿಕೊಂಡಿದೆಯೋ ಆ ಪರವಸ್ತುವು ಅಮಿತ ವಾದದ್ದು, ಅಮೇಯವಾದದ್ದು. ಲೋಕವಿಜ್ಞಾನಕ್ಕೆ ಉಪಯುಕ್ತವಾಗುವ ಇಂದ್ರಿಯ ಸಾಧನಗಳು ಲೋಕಾತೀತದ ವಿಜ್ಞಾನಕ್ಕೆ ಉಪಯೋಗಪಡಲಾರವು. ಆ ಅಲೌಕಿಕ ವಸ್ತುವನ್ನು ಕುರಿತ ಜ್ಞಾನವು ನಮಗೆ ಬೇಕಾದರೆ ಅದಕ್ಕೆ ಬೇರೆ ಸಾಧನಗಳನ್ನು ಸಂಪಾದಿಸಬೇಕು. ಅಂಥ ಸಾಧನಗಳನ್ನು ನಮಗೆ ತಿಳಿಸಬಲ್ಲದ್ದು ವೇದ.

ಯಾವ ವಿಸ್ತಾರವಾದ ಸಂಸ್ಕೃತಗ್ರಂಥರಾಶಿಯು ಲೋಕದಲ್ಲಿ ವೇದವೆಂದು ಪ್ರಸಿದ್ಧ ವಾಗಿದೆಯೋ ಅದರ ರಚನೆಯ ಕಾಲವನ್ನು ನಿರ್ಣಯಿಸಲು ಸಂದಿಗ್ಧವಲ್ಲದೆ ನಿಶ್ಚಿತ ವಾಗಿರುವ ಸಾಧನಗಳಿಲ್ಲ. ಸಮಸ್ತವೇದವೂ ಒಂದೇ ವಾಕ್ಯವೆಂದೂ, ಅದು ಪುರುಷ ನಿರ್ಮಿತವಾಗದೆ ಪರಮೇಶ್ವರನ ನಿಃಶ್ವಾಸವಾಗಿ ಬಂದದ್ದೆಂದೂ ವಾದಿಸುವುದು ಪುರಾತನವೈದಿಕರ ಮತ. ಆದರೆ ವೇದವಾಙ್ಮಯದ ನಾನಾಭಾಗಗಳಲ್ಲಿಯ ವಿಷಯ ಗಳು ಎಷ್ಟೋ ಕಡೆ ಪರಸ್ಪರ ಸಂಬದ್ಧಗಳಾಗದೆ ಬಿಡಿಬಿಡಿಯಾಗಿರುವಂತೆ ಕಾಣುತ್ತದೆ. ಈ ಮೇಲುಮೇಲಿನ ಅನನ್ವಿತತೆಗೆ ಕಾರಣವೇನಿರಬಹುದೆಂದು ವಿಚಾರಿಸಹೊರಟರೆ ಅದು ಆ ಗ್ರಂಥದ ಕಾಲಾನುಕ್ರಮದ ಬೆಳವಣಿಗೆಯಿಂದ, ಮಹರ್ಷಿಗಳಿಗಾದ ಬುದ್ಧಿ ವಿಕಾಸವಶದಿಂದ, ಅವರ ನೂತನಜ್ಞಾನಸಂಪಾದನೆಯಿಂದ, ಅವರ ಆಲೋಚನೆ-ಅಭಿಪ್ರಾಯಗಳ ಪರಂಪರಾಭಿವೃದ್ಧಿಯಿಂದ ಉಂಟಾಗಿರಬಹುದೆಂದು ಹೇಳಬೇಕಾಗು ತ್ತದೆ. ಆಗತಾನೆ ಹುಟ್ಟಿದ ಹಸುಳೆಯ ಬಾಯಲ್ಲಿ ಕಾಣಲಾಗದ ಹಲ್ಲೂ ಅದರ ತಲೆಯಲ್ಲಿ ಇಲ್ಲದ ಕೂದಲೂ ಅದರ ಮೈ-ಕೈಗಳಲ್ಲಿ ತೋರದ ಪುಷ್ಟಿಯೂ ಒಂದೆರಡು ವರ್ಷಗಳಾದ ಬಳಿಕ ಅದರಲ್ಲಿ ತೋರುತ್ತವೆ. ಜನನಕಾಲದಲ್ಲಿದ್ದ ಹೊಕ್ಕಳುಗಡ್ಡೆಯೂ ಮೈಕೈಗಳ ಚೆಂಗಾವಿಯೂ ಆಮೇಲೆ ಇಲ್ಲದೆ ಹೋಗುತ್ತವೆ. ಈ ಬದಲಾವಣೆಗಳ ಕಾರಣದಿಂದ, ಹುಟ್ಟಿದಾಗ ನಾವು ನೋಡಿದ ಎಳೆಗೂಸು ಬೇರೆ, ಒಂದೆರಡು ವರ್ಷಗಳಾದ ಬಳಿಕ ನಾವು ನೋಡುವ ಹುಡುಗ ಬೇರೆ ಎಂದು ನಾವು ಸಿದ್ಧಾಂತ ಮಾಡುವುದಿಲ್ಲ. ಎಳೆಯ ಮಗುವೇ ಕಾಲಪರಿವರ್ತನೆಯಿಂದ ಅಂಗಾಂಗ ಗಳಲ್ಲಿ ವ್ಯತ್ಯಾಸಗೊಂಡು ಹುಡುಗನಾಗಿದ್ದಾನೆಂಬುದನ್ನು ಯಾವ ಹೊರಗಣ ಕಾರಣ ವಿವರಗಳನ್ನೂ ಅಪೇಕ್ಷಿಸದೆಯೇ ನಾವು ಒಪ್ಪಿಕೊಳ್ಳುತ್ತೇವೆ. ಬೆಳವಣಿಗೆ ಎಂದರೆ ಬದಲಾವಣೆ, ವ್ಯತ್ಯಾಸವಿಲ್ಲದೆ ವೃದ್ಧಿಯಿಲ್ಲ. ವೇದವಾಙ್ಮಯದ ಅಂತರ್ಭಾವಗಳ ವಿಚಾರದಲ್ಲಿಯೂ ಹಾಗೆಯೇ ನಾವು ಒಂದು ಪರಿವೃದ್ಧಿಕ್ರಮವನ್ನು, ಒಂದು ವಿಕಸನಚರಿತ್ರೆಯನ್ನು ಅಧ್ಯಾಹಾರವಾಗಿ ಇಟ್ಟುಕೊಂಡರೆ ಆಗ ನಮಗೆ ಮೊದಲು ಆಪಾತತಃ ಅಸಂಬದ್ಧವೆಂದು ತೋರಿದ್ದ ವೈದಿಕಭಾವನೆಗಳಲ್ಲಿ ಒಂದು ಅನುಕ್ರಮ ಸಂಬಂಧವು ಕಂಡುಬರುತ್ತದೆ.

ವೇದವು ಈಗಿರುವಷ್ಟೂ ಒಂದೇ ಕಾಲದಲ್ಲಿ ಒಂದೇ ಸಾರಿ ಹುಟ್ಟಿಬಂದ ಗ್ರಂಥವಲ್ಲ.

ಅದು ಒಂದೇ ಮುಖದಿಂದ ಒಂದೇ ಆವರ್ತಿ ಬಂದದ್ದಲ್ಲ.

ಅದು ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ಮಹರ್ಷಿಗಳ ಮುಖಾಂತರ ಬಂದದ್ದು. ಹಾಗೆ ಅದು ಬಂದದ್ದು ಜಗದೀಶಪ್ರೇರಣೆಯಿಂದಲೇ ಇರಬಹುದು.

ಋಷಿಗಳ ಅಂತಃಸ್ಫೂರ್ತಿಯು ಈಶ್ವರಪ್ರಸಾದವೆಂದು ನಾವು ಭಾವಿಸಿದರೆ ಅದು ತಪ್ಪೆಂದು ಯಾರೂ ಸಾಧಿಸಲಾಗದು. ಆದರೆ ಆ ಪ್ರಸಾದವಾಣಿ ಬಂದದ್ದು ನಾನಾದ್ವಾರಗಳಿಂದ ಮತ್ತು ನಾನಾಕಾಲಗಳಲ್ಲಿ. ಆದದ್ದರಿಂದ ಅದರ ವಾಕ್ಯಗಳಲ್ಲಿ ಕಾಲದೃಷ್ಟಿಯ ಪೂರ್ವಾಪರ ವಿವೇಚನೆಗೆ ಅವಕಾಶವುಂಟು.

ವೇದದ ಕಾಲವನ್ನು ಕುರಿತು ಸರ್ವಸಮ್ಮತವಾದ ಸಿದ್ಧಾಂತವಾವುದೂ ಆಗಿಲ್ಲ. ಪಾಶ್ಚಾತ್ಯವಿದ್ವಾಂಸರು ನಡೆಸಿರುವ ಸಂಶೋಧನೆಗಳ ಮೇರೆಗೆ ಕ್ರಿಸ್ತಶಕಾರಂಭಕ್ಕೆ ಒಂದು ಸಾವಿರದ ಐದುನೂರು ವರ್ಷಗಳ ಹಿಂದೆ ವೇದಮಾರ್ಗಿಗಳಾದ ಆರ್ಯಜನರು ಏಷ್ಯಾಭೂಖಂಡದ ಮಧ್ಯಭಾಗದಲ್ಲಿ ಎಲ್ಲಿಯೋ ವಾಸಿಸುತ್ತಿದ್ದರೆಂದು ಒಂದು ಅಭಿಪ್ರಾಯವಿದೆ. ಅದರಂತೆ ಅದು ಮೂರುಸಾವಿರದ ಐನೂರು ವರ್ಷದ್ದು. ವಾಸ್ತವವಾಗಿ ವೇದವು ಅದಕ್ಕಿಂತ ಬಹು ಪ್ರಾಚೀನವಾದದ್ದು ಎಂಬ ಅಭಿಪ್ರಾಯವೂ ಉಂಟು.

# ೫. ನಿತ್ಯತ್ವ – ಅಪೌರುಷೇಯತ್ವ

ವೇದವು ಅಪೌರುಷೇಯವೆಂದೂ ನಿತ್ಯವೆಂದೂ ವೈದಿಕರ ಭಾವನೆ. ಆ ಭಾವನೆಯ ಆಂತರ್ಯವನ್ನು ತಿಳಿದುಕೊಳ್ಳುವುದು ಆವಶ್ಯಕ.

ವೇದ ಎಂಬ ಪದವು (ವಿದ-ಜ್ಞಾನೇ) ತಿಳಿದುಕೋ ಎಂಬ ಧಾತುವಿನಿಂದ ಬಂದದ್ದಾಗಿ, ಜ್ಞಾನ, ತಿಳಿವಳಿಕೆ ಎಂದು ಅರ್ಥವನ್ನು ಕೊಡತಕ್ಕದ್ದಾಗಿದೆ. ಮನುಷ್ಯನ ಜ್ಞಾನವಾದರೋ ನೂರಾರು ವಿಷಯಗಳಲ್ಲಿದೆ: (೧) ಮನುಷ್ಯಪ್ರಯತ್ನದಿಂದ ಸಂಪಾದಿತವಾದದ್ದು ಮತ್ತು (೨) ಕ್ರಮಕ್ರಮವಾಗಿ ಸಂಪಾದಿತವಾದದ್ದು.

ನಮ್ಮ ಆಹಾರಸಾಮಗ್ರಿಗಳು, ಪಾಕವಿಧಾನ, ಉಡುಗೆ-ತೊಡುಗೆಗಳ ಪರಿಷ್ಕಾರ, ವ್ಯಾಧಿಚಿಕಿತ್ಸೆಯ ಕ್ರಮ, ವಾಹನ-ಯಂತ್ರಗಳ ರಚನೆ — ಈ ನಾನಾ ಜೀವಿತೋಪ ಕರಣಗಳ ಚರಿತ್ರೆಯಲ್ಲಿ ಪುರುಷಯತ್ನವೂ ಅಪೂರ್ವ ನಿರ್ಮಾಣವೂ ಕಾಣಬರುತ್ತ ವಲ್ಲವೆ? ಮೋಟರ್ ಬಂಡಿ, ಬೈಸಿಕಲ್ಲು, ಏರೋಪ್ಲೇನ್ — ಇವು ಪೂರ್ವ ಕಾಲದಲ್ಲಿ ಇಲ್ಲದೆ ಈಚೀಚೆಗೆ ನಮ್ಮ ಕಾಲದಲ್ಲಿ ಉಂಟಾಗಿ, ಆಗಾಗ ಬದಲಾವಣೆ ಗಳನ್ನು ಪಡೆಯುತ್ತಿರುವುದು ನಮಗೆಲ್ಲಾ ಪ್ರತ್ಯಕ್ಷವಾಗಿರುವ ಸಂಗತಿ. ಈ ವಾಹನ ಯಂತ್ರಗಳನ್ನು ಕುರಿತ ಜ್ಞಾನ ನಿನ್ನೆ ಇದ್ದದ್ದಲ್ಲದೆ ಈ ಹೊತ್ತು ಉಂಟಾಗಿ ನಾಳೆ ಮಾರ್ಪಡಬಹುದಾದದ್ದು. ಆದ ಕಾರಣ ಅದು ನಿತ್ಯವೆನಿಸಿಕೊಳ್ಳಲಾರದು ಮತ್ತು ಅದು ಪುರುಷಕೃತವಾದದ್ದರಿಂದ ಅಪೌರುಷೇಯವೆನಿಸಿಕೊಳ್ಳಲಾರದು. ಹಾಗಿದ್ದ ಮೇಲೆ ವೇದದಲ್ಲಿಯ ಜ್ಞಾನಕ್ಕೆ ನಿತ್ಯತ್ವವೂ ಅಪೌರುಷೇಯತ್ವವೂ ಹೇಗೆ ಬರುತ್ತದೆ? ಎಂದು ಪ್ರಶ್ನೆಯೇಳಬಹುದು.

ಅದಕ್ಕೆ ಉತ್ತರ ಹೀಗೆ:

ಲೌಕಿಕವಸ್ತುಗಳ ವಿಷಯದಲ್ಲಿ ಜ್ಞಾನವು (೧) ಪುರುಷಪ್ರಯತ್ನದಿಂದ (೨) ಕ್ರಮಶಃ ಲಭ್ಯವಾಗತಕ್ಕದ್ದು. ಅಲೌಕಿಕವಿಷಯದಲ್ಲಿ ಆ ರೀತಿ ಲಭ್ಯವಾದ ಜ್ಞಾನವು ಪ್ರಯೋಜನಕ್ಕೆ ಬರಲಾರದು. ಲೌಕಿಕವಿಷಯದಲ್ಲಿ ನಮ್ಮ ಜ್ಞಾನವು ಸಾಧುವೆಂಬುದಕ್ಕೆ ಪ್ರಮಾಣವಿರುತ್ತದೆ. ಆದರೆ ಪ್ರತ್ಯಕ್ಷಾನುಭವದಲ್ಲಿ ಅಲೌಕಿಕ ವಸ್ತುವಿನ ವಿಷಯದಲ್ಲಿ ಕೇವಲ ಲೋಕಾನುಭವದ ಪ್ರಮಾಣವು ಸಾಕಾಗಲಾರದು. ಪರತತ್ತ್ವ ವಿಚಾರದಲ್ಲಿ ತಕ್ಕ ಪ್ರಮಾಣವು ಕಾಲ-ದೇಶಭೇದಗಳಿಂದ ಬಾಧೆಪಡೆಯ ದಂಥಾದ್ದಾಗಿರಬೇಕು. ಈ ಹೊತ್ತು ಒಂದೂ, ನಾಳೆ ಇನ್ನೊಂದೂ ಆಗಬಹುದಾದ ಮಾತನ್ನು ನಂಬಿಕೊಂಡು ಪರತತ್ತ್ವವನ್ನು ಹುಡುಕಹೊರಡಲಾಗುವುದಿಲ್ಲ. ಅದಕ್ಕೆ

ನಮಗೆ ಒಂದು ನಿಷ್ಕೃಷ್ಟವೂ ಸ್ಥಿರವೂ ಆದ ಭರವಸೆ ಬೇಕು. ಲೌಕಿಕವಿಷಯದಲ್ಲಿ ನಡೆಯಬಹುದಾದಂಥ ಪ್ರಯೋಗಪರೀಕ್ಷೆ (ಎಕ್ಸ್‌ಪೆರಿಮೆಂಟ್)ಗಳಿಗೂ ಹಂಗಾಮಿ ಏರ್ಪಾಡುಗಳಿಗೂ ಅಲ್ಲಿ ಅವಕಾಶವಿರದು. ಅಲೌಕಿಕವಿಷಯದಲ್ಲಿ ನಮ್ಮ ಯತ್ನ ಸಾರ್ಥಕವಾಗಬೇಕಾದರೆ ನಮ್ಮ ಮಾರ್ಗದರ್ಶಕನು ಸಂದೇಹಕ್ಕೂ ಅಸಾಮಂಜಸ್ಯಕ್ಕೂ ಪೂರ್ವಾಪರ ವಿರೋಧಕ್ಕೂ ಅವಕಾಶಕೊಡದಂಥವನಾಗಬೇಕು. ಇಂಥ ಗುರುವು ಋಷಿ. ಆತನು ಪರತತ್ತ್ವವನ್ನು ಸ್ವಾನುಭವದಿಂದ ಕಂಡವನು; ಆತನ ಮಾತು ಸ್ವಾರ್ಥದ ಸೋಂಕಿಲ್ಲದ್ದು. ಆದದ್ದರಿಂದ ಅದು ನಮಗೆ ಆಪ್ತವಾಕ್ಯ — ನಮಗೆ ಬೇಕಾದ ವಿಷಯವನ್ನು ತಾನು ಚೆನ್ನಾಗಿ ತಿಳಿದುಕೊಂಡು ತನ್ನಲ್ಲಿ ಯಾವ ದುರುದ್ದೇಶವನ್ನೂ ಇಟ್ಟುಕೊಂಡಿರದ ಸ್ನೇಹಿತನು ಆಡುವ ಹಿತವಚನ.

ವೇದದ ನಿತ್ಯತ್ವವೂ ಅಪೌರುಷೇಯತ್ವವೂ ಅದರ ಅಲೌಕಿಕವಿಷಯಬೋಧನೆಗೆ ಮಾತ್ರ ಅನ್ವಯಿಸಬೇಕಾದದ್ದು. ವೇದದಲ್ಲಿ ಲೌಕಿಕಪ್ರಸ್ತಾವಗಳು ಎಷ್ಟೋ ಬರುತ್ತವೆಂದು ಮೇಲೆ ನೋಡಿದೆವಲ್ಲವೆ? ಆಗಲೇ ಹೇಳಿದಂತೆ ಲೌಕಿಕಭಾಗದ ವಾಕ್ಯಗಳನ್ನು ನಾವು ವೇದದ ಮುಖ್ಯಭಾಗವೆಂದು ಗ್ರಹಿಸಲಾಗುವುದಿಲ್ಲ. ಅವುಗಳಲ್ಲಿ ಎಷ್ಟೋ ಸಂಗತಿಗಳು ಆಧುನಿಕಭೌತಶಾಸ್ತ್ರ ಮೊದಲಾದ ವಿಜ್ಞಾನ (Science) ಶಾಸ್ತ್ರಗಳಿಗೆ ಸಮಂಜಸವೆನಿಸಲಾರದು. ಒಂದು ಉದಾಹರಣೆಯನ್ನು ನೋಡೋಣ. ಛಾಂದೋಗ್ಯೋಪನಿಷತ್ತಿನ ನಾಲ್ಕನೆಯ ಅಧ್ಯಾಯದ ಮೂರನೆ ಪ್ರಪಾಠಕದಲ್ಲಿ —

**ವಾಯುರ್ವಾವ ಸಂವರ್ಗಃ।... ಯದಾ ಸೂರ್ಯೋಽಸ್ತಮೇತಿ।**
**ವಾಯುಮೇವಾಪ್ಯೇತಿ। ಯದಾ ಚಂದ್ರೋಽಸ್ತಮೇತಿ। ವಾಯುಮೇವಾಪ್ಯೇತಿ।**

ಎಂದಿದೆ. ಇದರ ಅರ್ಥ ವಾಯುವೇ ಎಲ್ಲವನ್ನೂ ಸಂಗ್ರಹಿಸಬಲ್ಲದ್ದು, ಅಥವಾ ಗ್ರಸನ ಮಾಡಬಲ್ಲದ್ದು ಅಥವಾ ಹಿಡಿಯಬಲ್ಲದ್ದು, ತಿನ್ನಬಲ್ಲದ್ದು. ಸೂರ್ಯನು ಅಸ್ತಮಯ ಹೊಂದಿದ ಬಳಿಕ ವಾಯುವನ್ನೇ ಸೇರುತ್ತಾನೆ.

ಇದರ ಮೇಲೆ ಶ್ರೀಶಂಕರಾಚಾರ್ಯರು ಹೀಗೆ ಭಾಷ್ಯ ಮಾಡಿದ್ದಾರೆ:

**ವಾಯುನಾ ಹ್ಯಸ್ತಂ ನೀಯತೇ ಸೂರ್ಯಃ।**
**ಚಲನಸ್ಯ ವಾಯುಕಾರ್ಯತ್ವಾತ್॥**

ಚಲನೆಯು ವಾಯುವಿನ ಕೆಲಸ. ಸೂರ್ಯನನ್ನು ಅಸ್ತಮಾನಕ್ಕೆ ತಳ್ಳಿಕೊಂಡು ಹೋಗುವುದು ಗಾಳಿ.

ಈ ಮಾತನ್ನು ಇಂದಿನ ಭೌತವಿಜ್ಞಾನಿಗಳು ಒಪ್ಪಲಾರರು. ಈ ವಿಜ್ಞಾನಿಗಳ ವಾದ

ಸಾಧುವಾದದ್ದೆಂದೂ ಸೂರ್ಯ-ವಾಯುಗಳ ಸಂಬಂಧವನ್ನು ಕುರಿತ ಶಂಕರರ ವಾಕ್ಯವು ಅಸಾಧುವೆಂದೂ ನಾವು ಇಟ್ಟುಕೊಂಡರೂ ಅದರಿಂದ ಶಾಂಕರ ಸಿದ್ಧಾಂತಕ್ಕೇನೂ ಬಾಧೆಬರಲಾರದು. ಏಕೆಂದರೆ, (ಸಯನ್ಸ್) ವಿಜ್ಞಾನವು ಲೌಕಿಕ ವಿಷಯದ್ದು. ಶಾಂಕರಸಿದ್ಧಾಂತವು ಲೋಕಾತೀತವಿಷಯದ್ದು. ಲೋಕಾತೀತ ವಿಷಯವನ್ನು ಕುರಿತ ಛಾಂದೋಗ್ಯದ ವಾಕ್ಯಗಳೂ, ಶಂಕರಭಾಷ್ಯವಾಕ್ಯಗಳೂ ಅವ್ಯಾಹತವಾಗಿರುತ್ತವೆ.

ಅಲೌಕಿಕವಸ್ತುವನ್ನು ಕುರಿತಾದರೂ ವೇದವು ನೀಡುವ ಜ್ಞಾನವನ್ನು ನಿತ್ಯವೆಂದೂ ಅಪೌರುಷೇಯವೆಂದೂ ಹೇಗೆ ಹೇಳಬಹುದು? ವೇದವು ಒಂದು ವಾಕ್ಯರಾಶಿ. ವಾಕ್ಯವಾದರೋ ಒಂದು ಲೌಕಿಕವಸ್ತು. ವಕ್ತೃವಿದ್ದ ಹೊರತು ವಾಕ್ಯವಿಲ್ಲ. ಅವನು ಹುಟ್ಟುವ ಮುಂಚೆ ಅದು ಇದ್ದಿರಲಾರದು. ವೇದವಕ್ತೃವಾದ ಋಷಿಯೂ ಒಬ್ಬ ಪುರುಷನಷ್ಟೆ? ಈ ಪ್ರಶ್ನೆಗೆ ಸಮಾಧಾನ ಈ ರೀತಿ ಇರುತ್ತದೆ:

ವಾಕ್ಕು ಸ್ವತಂತ್ರವಾಗಿ ಬೆಲೆಯುಳ್ಳ ವಸ್ತುವಲ್ಲ. ಅದಕ್ಕೆ ಬೆಲೆ ಅದರ ಅರ್ಥದ ಕಾರಣದಿಂದ. ಎಲ್ಲಿಯೋ ಆದ ಸದ್ದು ನಮ್ಮ ಕಿವಿಯನ್ನು ತಾಕದೆ ಹೋದರೆ ಅದಕ್ಕೆ ಹೇಗೆ ಬೆಲೆ ಸಲ್ಲದೋ ಹಾಗೆಯೇ. ಕಿವಿಯನ್ನು ಮುಟ್ಟಿದ ಶಬ್ದವು ಮನಸ್ಸನ್ನು ಮುಟ್ಟದೆ ಹೋದರೂ ಅದಕ್ಕೆ ಗಣನೆಯಿಲ್ಲ. ಮಾತಿನಿಂದ ಮನಸ್ಸಿಗೆ ತೋರಿಬರುವ ಅರ್ಥವೇ ಮಾತಿನ ಸಾರಭಾಗ. ಮಾತು ಬತ್ತದ ಹೊಟ್ಟು, ಅರ್ಥ ಅಕ್ಕಿಯ ಕಾಳು.

ಹೀಗೆ ವಾಕ್ಕಿಗೆ ಅರ್ಥವೇ ಜೀವಾಳ ಎಂದಮೇಲೆ ವೇದದ ತಿರುಳು ಯಾವುದಾಯಿತು? ಅದರಲ್ಲಿಯ ಜೀವಾಳವು ಜಗದ್ವಿಜ್ಞಾನ ಅಥವಾ ಅತೀಂದ್ರಿಯ ವಸ್ತುಜ್ಞಾನ. ಈ ತತ್ತ್ವಜ್ಞಾನವು ನಿತ್ಯವಾದದ್ದಾದರೆ ಅದನ್ನೊಳಗೊಂಡಿರುವ ವೇದವು ನಿತ್ಯವಾದದ್ದು.

ಜ್ಞಾನವು ಸ್ವತಸ್ಸಿದ್ಧವೆಂದು ವೇದಮತ. ಲೋಕಾತೀತವಾದ ಸ್ವಾಭಾವಿಕ ಲಕ್ಷಣಗಳಲ್ಲಿ ಜ್ಞಾನವೂ ಒಂದು. 'ಸಚ್ಚಿದಾನಂದ' ಎಂಬ ಪದದಲ್ಲಿಯ 'ಚಿತ್' ಪದವು ಇದನ್ನು ಸೂಚಿಸುತ್ತದೆ. ಜ್ಞಾನವೇ ಬ್ರಹ್ಮ ಎಂಬುದು ಉಪನಿಷತ್ತುಗಳ ಬೋಧನೆ. ಹೀಗೆ ಮನುಷ್ಯನಲ್ಲಿರುವ ಜ್ಞಾನವು ನಿತ್ಯವೂ ಸರ್ವಗತವೂ ಸಾರ್ವಕಾಲಿಕವೂ ಕಾಲ-ದೇಶಭೇದಗಳಿಂದ ಅಬಾಧಿತವೂ ಆದ ಚಿದ್ವಸ್ತುವಿನ ಅಂಶ. ಈ ಕಾರಣದಿಂದ ಅದು ನಿತ್ಯ.

ವೇದವ್ಯಾಸಂಗಕ್ಕೆ ಅವಶ್ಯವಾದ ಪೂರ್ವಸಿದ್ಧತೆಯನ್ನು ಕುರಿತು ಒಂದೆರಡು ಮಾತು ಹೇಳಿದ್ದಾಗಿದೆ. ಆ ಸಿದ್ಧತೆ ಒಂದು ಭಾಗದಲ್ಲಿ ಶಿಕ್ಷಾವ್ಯಾಕರಣಾದಿಶಾಸ್ತ್ರ

ರೂಪವಾದದ್ದು; ಇನ್ನೊಂದುಭಾಗದಲ್ಲಿ ಶೌಚ, ಶಮ ಮೊದಲಾದ ನೀತಿಶಿಕ್ಷಣ ರೂಪವಾದದ್ದು. ಈ ಎರಡು ಸಿದ್ಧತೆಗಳಿಂದಲೂ ಬೇರೆಯಾದ ಮನಃಪರಿಪಾಕ ಒಂದಿರುತ್ತದೆ. ಅದು ಮಿಕ್ಕೆರಡು ಸಿದ್ಧತೆಗಳಷ್ಟೇ ಮುಖ್ಯವಾದದ್ದು. ಆ ಮನಃಪರಿಪಾಕ ವನ್ನು ಎರಡು ಅಂಶಗಳಾಗಿ ಹೇಳಬಹುದು:

(೧) ವೇದವಾಕ್ಯದ ಲಕ್ಷ್ಯಾರ್ಥವನ್ನು ಗಮನದಲ್ಲಿರಿಸಿಕೊಳ್ಳಬೇಕಾದದ್ದು, ಶಬ್ದ ವಿವರಕ್ಕೆ ಅಷ್ಟು ಗಮನಕೊಡಬೇಕಾದದ್ದಿಲ್ಲ.

(೨) ಪ್ರಕರಣ ಆರಂಭವಾದ ಮೇಲೆ ಅದು ಮುಗಿಯುವವರೆಗೂ ನಡುನಡುವೆ ಮನಸ್ಸಿನಲ್ಲಿ ಉದಿಸಬಹುದಾದ ಸಂಶಯಗಳನ್ನು ಅಮಾನತ್ತಿನಲ್ಲಿರಿಸಿ ವಾಕ್ಯವು ಸತ್ಯವೆಂಬ ನಂಬಿಕೆಯನ್ನಿರಿಸಿಕೊಳ್ಳುವುದು.

ಈ ಎರಡೂ ಕಾವ್ಯವ್ಯಾಸಂಗಕ್ಕೂ ಉಚಿತವಾದ ನಿಯಮಗಳು. ಈ ನಿಯಮ ಗಳನ್ನು ನಮ್ಮ ಭಾರತೀಯ ಕಾವ್ಯಮೀಮಾಂಸಕರು ಸ್ಪಷ್ಟಮಾಡಿಲ್ಲ. ಆಂಗ್ಲೇಯ ಕಾವ್ಯಮೀಮಾಂಸಕರಲ್ಲಿ ಗಣ್ಯರಾದವರು ಸ್ಪಷ್ಟಪಡಿಸಿದ್ದಾರೆ.

ವೇದವು ಪ್ರತ್ಯಕ್ಷವಸ್ತುವನ್ನು ಕುರಿತ ಪ್ರಬಂಧವಲ್ಲ. ಕಾವ್ಯವೂ ಬಹುಮಟ್ಟಿಗೆ ಅಂಥಾದ್ದೇ. ಎರಡು ಜಾತಿಯ ಪ್ರಬಂಧಗಳೂ ಲೋಕಾತೀತವಾದ ಸಂಗತಿಯನ್ನು ಕುರಿತಂಥವೇ. ಅದೃಶ್ಯವಾದದ್ದನ್ನು ದೃಶ್ಯವಾದದ್ದು ಹೇಗೋ ಹಾಗೆ ಅನುಭವಕ್ಕೆ ತಂದುಕೊಡುವುದು ಉಭಯಪ್ರಬಂಧಗಳಿಗೂ ಇರುವ ಉದ್ದೇಶ.

ಮನುಷ್ಯನಿಗಾಗುವ ನಾನಾ ಅನುಭವಗಳ ವಿಷಯದಲ್ಲಿ, ಅವನ ಒಳಗಡೆ 'ಇದೇನು?' 'ಅದೇಕೆ?' 'ಇದು ಹೇಗೆ?' ಎಂದು ಪ್ರಶ್ನೆಗಳನ್ನೆಬ್ಬಿಸುತ್ತ, 'ಅದು ಹೀಗಿರ ಬಹುದು', 'ಇದು ಹಾಗಿರಲಾರದು' ಎಂದು ಉತ್ತರ ಹೇಳಿಸುವ ಅಂತಶ್ಶಕ್ತಿಯೊಂದು ಸಹಜವಾಗಿರುತ್ತದೆಯಲ್ಲವೆ? ಈ ಜ್ಞಾನಮೂಲವಾದ ಚಿಚ್ಛಕ್ತಿಯು ಮನುಷ್ಯಪ್ರಾಣಿ ಯಲ್ಲಿ ಸರ್ವದಾ ಕಾರ್ಯಕಾರಿಯಾಗಿ ಇದ್ದುಕೊಂಡೇ ಇರುತ್ತದೆ. ಅದೇ ಮನುಷ್ಯತೆಯ ಲಕ್ಷಣ. ಮನುಷ್ಯನಿದ್ದೂ ಜ್ಞಾನಶಕ್ತಿ ಕೆಲಸಮಾಡದಿದ್ದ ಕಾಲವು ಜಗತ್ತಿನ ಚರಿತ್ರೆಯಲ್ಲಿ ಎಂದೂ ಇದ್ದಿರಲಾರದು. ಮನುಷ್ಯಜೀವಿ ಎಂದೆಂದು ಎಲ್ಲೆಲ್ಲಿ ಇದ್ದಿದ್ದನೋ ಅಂದಂದೆಲ್ಲಾ ಆಯಾ ಕಡೆಯಲ್ಲೆಲ್ಲಾ ಅವನ ಚಿಚ್ಛಕ್ತಿ ಒಂದು ಬಗೆಯಲ್ಲಿಲ್ಲದಿದ್ದರೆ ಇನ್ನೊಂದು ಬಗೆಯಲ್ಲಿ ಕೆಲಸಮಾಡಿಕೊಂಡೇ ಬಂದಿದೆ.

ಈ ಕಾರಣದಿಂದ ಮನುಷ್ಯನ ಜ್ಞಾನವೆಂಬುದು ನಿರಂತರವಾಗಿ ಬೆಳೆಯುತ್ತಿರುವ ಒಂದು ಸಿದ್ಧಿ. ಅದು ಕೆಲಸ ಮಾಡಿದಂತೆಲ್ಲಾ ಬೆಳೆದುಕೊಳ್ಳುತ್ತಿರುವುದು

ಕಾವ್ಯಶಾಸ್ತ್ರಾದಿಗ್ರಂಥಸಂಪತ್ತು. ಒಂದು ದಿನ ಮನುಷ್ಯಬುದ್ಧಿ ಮಾಡಿದ ಕೆಲಸ ಮತ್ತೊಂದು ದಿನ ಅದು ಮಾಡುವ ಕೆಲಸಕ್ಕೆ ಆಧಾರ. ಒಂದು ಯುಗದ ಬುದ್ಧಿಕಾರ್ಯ ಮತ್ತೊಂದು ಯುಗದ ಬುದ್ಧಿಕಾರ್ಯಕ್ಕೆ ಸಾಮಗ್ರಿ. ಹೀಗೆ ನಿರಂತರ ವಾಗಿ ದಿನದಿಂದ ದಿನಕ್ಕೆ, ವರ್ಷದಿಂದ ವರ್ಷಕ್ಕೆ, ಯುಗದಿಂದ ಯುಗಕ್ಕೆ ಬೆಳೆದು ಕೊಂಡು ಹೋಗುತ್ತಿರುವುದು ಮನುಷ್ಯನ ಜ್ಞಾನೈಶ್ವರ್ಯ. ಈ ಬೆಳವಣಿಗೆಯೇ ಮನುಷ್ಯಚೈತನ್ಯದ ಸ್ವಭಾವ. ಹೀಗೆ ಜ್ಞಾನಾಭಿವೃದ್ಧಿ ಸಂತತವಾಗಿರುವುದರಿಂದ ಮತ್ತು ಸ್ವಾಭಾವಿಕವಾಗಿರುವುದರಿಂದ ಅದು ನಿತ್ಯ. ಅದರ ಮೂಲವು ಮನುಷ್ಯಕೃತ ವಾದದ್ದಲ್ಲದೆ ಪ್ರಕೃತಿನಿಯೋಜಿತವಾದದ್ದಾದ ಕಾರಣ ಅದು ಅಪೌರುಷೇಯ.

ಜೀವಲೋಕ ಎಂದು ಹುಟ್ಟಿತೋ ಜ್ಞಾನವೂ ಅಂದೇ ಹುಟ್ಟಿತು. ಆ ಲೋಕದ ಕೆಲವೆಡೆಗಳಲ್ಲಿ ಅದು ನಿದ್ರಿಸುತ್ತಿರುತ್ತದೆ. ಇನ್ನು ಕೆಲವೆಡೆಗಳಲ್ಲಿ ಅದು ಜಾಗ್ರತ ವಾಗಿರುತ್ತದೆ. ಮನುಷ್ಯಪ್ರಾಣಿ ಈ ಎರಡನೆಯ ವರ್ಗದ್ದು. ಮನುಷ್ಯಪ್ರಪಂಚದಲ್ಲಿ ನಾಲ್ಕಾರು ಅಂತಸ್ತುಗಳುಂಟಷ್ಟೆ? ಕೆಲಮಂದಿಯಲ್ಲಿ ಜ್ಞಾನವು ಬೀಜಾವಸ್ಥೆ ಯಲ್ಲಿರುತ್ತದೆ. ಕೆಲವರಲ್ಲಿ ಅದು ಮೊಳೆತು ಅಂಕುರವಾಗಿರುತ್ತದೆ. ಇನ್ನು ಕೆಲವರಲ್ಲಿ ಅದು ಗಿಡವಾಗಿ ಬೆಳೆದಿರುತ್ತದೆ. ಮತ್ತೆ ಕೆಲವರಲ್ಲಿ ಫಲಭರಿತವೃಕ್ಷವಾಗಿ ತನ್ನ ಬೀಜಗಳನ್ನು ಪುನರ್ಜನನಕ್ಕಾಗಿ ನೆಲದೊಳಕ್ಕೆಸೆಯುತ್ತಿರುತ್ತದೆ. ಹೀಗೆ ಯಾವುದೋ ಒಂದು ಅವಸ್ಥೆಯಲ್ಲಿ ಜ್ಞಾನವೆಂಬುದು ಜೀವದಲ್ಲಿ ಅದರ ಸತ್ತ್ವದ ಅಂಶವಾಗಿ ನಿರಂತರವೂ ಕೆಲಸ ಮಾಡುತ್ತಿರುತ್ತದೆ. ಜ್ಞಾನವು ನಿತ್ಯವಸ್ತು. ಅದಕ್ಕೆ ವಿಕಸನಸ್ಥಿತಿ ಮತ್ತು ಮುಕುಳಿತಸ್ಥಿತಿಗಳುಂಟೇ ಹೊರತು ಅಭಾವವೆಂಬುದು ಎಂದಿಗೂ ಇಲ್ಲ.

ಲೋಕದಲ್ಲಿ ಆಗಿಂದಾಗ್ಗೆ ಆಗುವ ನಾನಾಶಾಸ್ತ್ರಗಳ ಬರವಣಿಗೆಯೂ, ಹೊಸ ಶಾಸ್ತ್ರಗಳ ಆವಿರ್ಭಾವವೂ ಕಾಲಕ್ರಮದಲ್ಲಿ ಬಂದಿರುವುವಾದ ಕಾರಣ ಆ ಜ್ಞಾನವನ್ನು ಒಂದು ಅರ್ಥದಲ್ಲಿ ಕಾಲವಶವಾದದ್ದೆಂದು ಹೇಳಬಹುದು. ಆದರೆ ಪರವಸ್ತು ವಿಷಯಕಜ್ಞಾನವು ಒಂದು ದೃಷ್ಟಿಯಿಂದ ಅದಕ್ಕಿಂತ ವಿಲಕ್ಷಣವಾದದ್ದು. ಮಗು ಪ್ರಬುದ್ಧವಾದ ಕೂಡಲೇ ತಾನು ಯಾರು? ತನ್ನ ಸುತ್ತಮುತ್ತಲಿನವರು ಯಾರು? — ಎಂದು ತನ್ನೊಳಗೇ ಮಂದ-ಮಂದವಾಗಿಯಾದರೂ ವಿಚಾರ ನಡೆಸಿಕೊಳ್ಳ ಲಾರಂಭಿಸುತ್ತದೆ. ಈ ಯಾರು? ಏನು? ಏಕೆ? — ಎಂಬ ತೆರದ ಪ್ರಶ್ನೆಗಳೇ ತತ್ತ್ವಜಿಜ್ಞಾಸೆಗೆ ಅಂಕುರ. ಬುದ್ಧಿಗೆ ಪ್ರಕೃತಿಯ ಸನ್ನಿವೇಶಗಳ ಅನುಭವವು ಆದೊಡನೆಯೇ ಅಂಥ ಪ್ರಶ್ನೆಗಳೇಳುತ್ತವೆ. ಮಳೆ, ಮೋಡ, ಸಿಡಿಲು-ಮಿಂಚುಗಳು, ಬಿರುಗಾಳಿ, ಉರಿಬಿಸಿಲು, ಬೆಳದಿಂಗಳು, ಹಿಮ, ಗಿಡಬಳ್ಳಿಗಳ ಮೇಲಿನ ಚಿಗುರು,

ಹೂವು, ಹಣ್ಣೆಲೆ, ಹೀಚು, ಹಣ್ಣು, ದೇಹಗಳ ಹುಟ್ಟು-ಸಾವುಗಳು, ದೇಹದ ರೋಗಗಳು, ರಾಗದ್ವೇಷಾದಿಮನೋವಿಕಾರಗಳು — ಇಂಥ ನಾನಾ ಸನ್ನಿವೇಶಗಳು ಬುದ್ಧಿಯನ್ನು ಕೆಣಕಿ ಅದರಿಂದ ಪ್ರಶ್ನೆಗಳನ್ನು ಕೇಳಿಸುತ್ತವೆ. ಅದೇ ತತ್ತ್ವವಿಚಾರಕ್ಕೆ ತಳಹದಿ. ಆಶ್ಚರ್ಯ ಭಯಗಳೇ ತತ್ತ್ವಜಿಜ್ಞಾಸೆಯ ಮೂಲ. ಇವು ಪ್ರಾಣಿಮಾತ್ರಕ್ಕೆ ಸಹಜವಾದ ಮನೋಭಾವಗಳು. ಹೀಗೆ ತತ್ತ್ವವಿಚಾರ ಚೋದನೆಗಳು ಮನುಷ್ಯ ಲೋಕದಲ್ಲಿ ಸಂತತವಾಗಿ, ಸ್ವಯಂಭೂತವಾಗಿ ಇರುವುದರಿಂದ ತತ್ತ್ವಜ್ಞಾನಾಂಕುರವು ಮನುಷ್ಯಪ್ರಪಂಚದಲ್ಲಿ ನಿತ್ಯವಾಗಿರುತ್ತದೆಂದು ಹೇಳಬಹುದು. ಅದರ ದಶೆಯು ಅಂಕುರಪ್ರಾಯವಾದದ್ದೋ, ಪ್ರವೃದ್ಧವಾದದ್ದೋ ಅದು ಬೇರೆ ಮಾತು. ಎಂಥದೋ ಒಂದು ದಶೆಯಲ್ಲಿ ಅದು ಇದ್ದೇ ಇರುತ್ತದೆಂಬುದಂತೂ ನಿಸ್ಸಂಶಯವಾದ ಸಂಗತಿ. ತೀರಾ ಪ್ರಾಕೃತರೆಂದೂ, ಅನಾಗರಿಕರೆಂದೂ ಹೇಳಿಸಿಕೊಳ್ಳುವ ಕಾಡುಜನರಲ್ಲಿ ಸಹ ಮತವೆಂಬುದೊಂದು ಇರುತ್ತದೆ. ಅವರು ಯಾವುದೋ ಒಂದು ವಸ್ತುವನ್ನು ದೇವರೆಂದು ನಂಬಿ ಯಾವುದೋ ಒಂದು ಕ್ರಮದಲ್ಲಿ ಪೂಜಿಸುತ್ತಾರೆ. ಅಂಥ ಮೂಢಭಕ್ತಿ ಕೂಡ ದೈವವಿಜ್ಞಾನದ ಒಂದಾನೊಂದು ಪ್ರಾಥಮಿಕರೂಪ. ಹೀಗೆ ದೈವತತ್ತ್ವವಿಜ್ಞಾನವು ಲೋಕದಲ್ಲಿ ಒಂದು ನಿತ್ಯವಾದ ಸಂಗತಿ.

ಜ್ಞಾನವೆಂಬುದು ಸ್ವತಸ್ಸಿದ್ಧವಸ್ತುವೆಂದು ಮೇಲೆ ಹೇಳಿದ್ದೇವೆ. ಅದು ಜೀವದ ಒಳಗಡೆ ಇದ್ದುಕೊಂಡು ಸಹಜವಾಗಿ ಕೆಲಸಮಾಡತಕ್ಕ ಶಕ್ತಿಯೇ ಹೊರತು ಹೊರಗಡೆಯಿಂದ ಇತರರು ನಮ್ಮ ಜೀವದ ಒಳಗಡೆಗೆ ತಳ್ಳಿ ತುಂಬಿದ್ದಲ್ಲ. ಜ್ಞಾನವು ದೀಪದ ಬತ್ತಿಯೊಳಗಣ ಎಣ್ಣೆಯಂತೆ; ಗುರು, ಶಾಸ್ತ್ರ ಮೊದಲಾದವು ಹೊರಗಣ ಬೆಂಕಿಯ ಕಡ್ಡಿಯಂತೆ. ಬತ್ತಿಯಲ್ಲಿ ಜಿಡ್ಡಿಲ್ಲದಿದ್ದಾಗ ಬೆಂಕಿಯ ಕಡ್ಡಿಯಿಂದ ದೀಪ ಹೊತ್ತದು. ಮೊದಲು ಬೇಕಾದದ್ದು ಅಂತಸ್ಸಾಮಗ್ರಿ. ಆಮೇಲಿನದು ಬಾಹ್ಯೋಪಕರಣ. ಮನುಷ್ಯನ ಕಣ್ಣಿನಲ್ಲಿ ತೇಜಸ್ಸಿಲ್ಲದಿದ್ದಾಗ ವಿದ್ಯುದ್ದೀಪಗಳು ನೂರಿದ್ದರೂ ಅವನು ಕುರುಡನೇ. ಕಿವಿಯಲ್ಲಿ ಗ್ರಹಣಶಕ್ತಿ ಇಲ್ಲದಿರುವಾಗ ನೂರು ನಗಾರಿ ಬಡಿದರೂ ಅವನು ಕಿವುಡನೇ. ಹೀಗೆ ಜ್ಞಾನಕ್ಕೆ ಮೊದಲು ಬೇಕಾದದ್ದು ನೈಜವಾದ ಅಂತಶ್ಚೈತನ್ಯ. ಚೈತನ್ಯವು ಹೊರಗಿನಿಂದ ಬರುವುದಾಗದೆ ಸ್ವಯಂಭೂತವೇ ಆಗಿರುವ ಕಾರಣದಿಂದ ಅದು ಅಪೌರುಷೇಯ. ನಮ್ಮ ಪ್ರಪಂಚದಲ್ಲಿಯ ಎಲ್ಲಾ ಮಹಾವಿಭೂತಿಗಳೂ ಒಂದರ್ಥದಲ್ಲಿ ಅಪೌರುಷೇಯಗಳೇ. ಒಳ್ಳೆಯ ಕಾವ್ಯ, ಒಳ್ಳೆಯ ಸಂಗೀತ, ಒಳ್ಳೆಯ ಚಿತ್ರ — ಈ ಕಲಾಕೃತಿಗಳು ಮನುಷ್ಯನ ತಿಣುಕಾಟದಿಂದ ಸಿದ್ಧವಾಗತಕ್ಕವಲ್ಲ. ಹಾಗೆ ಸಿದ್ಧವಾಗುವ ಹಾಗಿದ್ದರೆ ನಮ್ಮಲ್ಲಿ ನೂರುಮಂದಿ ವಾಲ್ಮೀಕಿಗಳೂ ನೂರುಮಂದಿ ಷೇಕ್ಸ್ಪಿಯರುಗಳೂ ಇದ್ದಿರಬೇಕಾಗಿತ್ತು. ಒಂದು

ಕಲಾಕೃತಿಯಿಂದ ನಮ್ಮ ಅಂತರಂಗದಲ್ಲಿ ರಸಾವಿರ್ಭಾವವಾಗಬೇಕಾದರೆ ಆ ಕೃತಿಯಲ್ಲಿ ಒಂದು ವಿಶೇಷಶಕ್ತಿ ಇರಬೇಕು. ಆ ಶಕ್ತಿಯನ್ನು ತನ್ನ ಕೃತಿಯೊಳಕ್ಕೆ ತರುವುದು ಹೇಗೆ? ತುಂಬುವುದು ಹೇಗೆ? — ಎಂಬ ರಹಸ್ಯವನ್ನು ಕಲೆಗಾರನಿಗೆ ಯಾವ ಗುರುವೂ ಕಲಿಸಲಾರ, ಯಾವ ಗ್ರಂಥವೂ ತಿಳಿಸಲಾರದು. ಆ ರಹಸ್ಯಸಂಪತ್ತು ಅವನಿಗೆ ತಾನೇ ತಾನಾಗಿ ಬರಬೇಕು. ಅದೇ ಸ್ಫೂರ್ತಿ, ಅದೇ ಪ್ರತಿಭೆ, ಅದೇ ಭಾವಾವೇಶ. ಆ ಸ್ಫೂರ್ತಿ ಅನ್ಯಜನರಿಂದ ದಾನವಾಗಿ ಬರತಕ್ಕದ್ದಲ್ಲ. ಆದುದರಿಂದಲೇ ಮಮ್ಮಟ ಭಟ್ಟನು ಕಾವ್ಯವನ್ನು *"ಅನನ್ಯಪರತಂತ್ರಾಂ"* "ಇತರರ ಕೈವಾಡಕ್ಕೆ ಒಳಪಟ್ಟದ್ದಲ್ಲ" — ಎಂದು ವರ್ಣಿಸಿದ್ದಾನೆ.

ಮಾನವಕಥೆಯನ್ನು ಬಣ್ಣಿಸುವ ಕಾವ್ಯಕ್ಕೆ ಬೇಕಾದ ಅಂತಃಸ್ಫೂರ್ತಿಯೇ ಹೀಗೆ ಮನುಷ್ಯಾಧೀನವಲ್ಲವೆಂದಮೇಲೆ ಜಗದ್ರಹಸ್ಯವನ್ನು ಕಂಡುಕೊಳ್ಳಬಲ್ಲ ಅಂತರ್ಬೋಧೆಯನ್ನು ಪುರುಷಾಧೀನವಾದದ್ದೆಂದು ಹೇಗೆ ಹೇಳಲಾದೀತು? ಕವಿಗೂ, ಕಲೋಪಾಸಕನಿಗೂ ಬೇಕಾದ ಭಾವಾವೇಗ — ಆ ಜೀವನರಹಸ್ಯ ದರ್ಶನ, ಆ ನಾದಪ್ರಭಾವದ ಕಲ್ಪನೆ — ಆ ನವನಿರ್ಮಾಣಪ್ರತಿಭೆ — ಎಲ್ಲಿಂದಲೋ, ಯಾವಾಗಲೋ, ಹೇಗೆಯೋ ಬರುತ್ತದೆ. ಅದು ಬರುವ ಕಾಲವನ್ನೂ, ದಾರಿಯನ್ನೂ ಕವಿಯೇ ಕಾಣ. ಆದದ್ದರಿಂದಲೇ ವರಕವಿಗಳು ತಾವು ಬರಿಯ ಬಿದಿರುಕೊಳವೆಯೆಂದೂ ಅದರಲ್ಲಿ ವೇಣುಗಾನವನ್ನು ಹೊರಡಿಸುವುದು ಪರಮೇಶ್ವರನ ಉಸಿರೆಂದೂ, ತಾವು ಬರಿಯ ವೀಣೆಯೆಂದೂ ತಮ್ಮೆದೆಯ ತಂತಿಗಳಿಂದ ನಾದವನ್ನು ಹೊರಡಿಸುವುದು ಪರಮೇಶ್ವರನ ಬೆರಳೆಂದೂ ಹೇಳಿಕೊಂಡಿರುತ್ತಾರೆ. ಇನ್ನು ಋಷಿಗಳಿಗಾದ ದಿವ್ಯದರ್ಶನವನ್ನು ಅವರು ತಮ್ಮ ಸ್ವಂತ ಬುದ್ಧಿಸಾಹಸದ ಫಲವೆಂದು ಹೇಳಿಕೊಳ್ಳಬಹುದೆ? ಅವರಿಗೆ ಯಾವುದೋ ಒಂದು ಸುಮುಹೂರ್ತದಲ್ಲಿ ಯಾವುದೋ ಒಂದು ಅದೃಷ್ಟಯೋಗದ ಘಳಿಗೆಯಲ್ಲಿ ಒಂದು ಅಲೌಕಿಕದೃಶ್ಯವು ಲಭಿಸಿತು, ಒಂದು ಜೀವಮೂಲತತ್ತ್ವದ ಸಂಪೂರ್ಣಚಿತ್ರಲೇಖ ಅವರ ಒಳಗಣ್ಣಿಗೆ ಕಾಣಬಂತು. ಆ ದಿವ್ಯದರ್ಶನವನ್ನು ಅವರು ಆಶ್ಚರ್ಯಾನಂದದ ಮಾತುಗಳಲ್ಲಿ ವರ್ಣಿಸಿದರು. ಹೀಗೆ ಅವರ ಕೈಕೆಲಸವೇನೂ ಇಲ್ಲದೆ ತಾನಾಗಿ ಅವರಿಗೆ ದೊರತದ್ದು ತತ್ತ್ವಜ್ಞಾನ. ಹೀಗೆ ಅದು ಅಪೌರುಷೇಯ.

**ಯಮೇವೈಷ ವೃಣುತೇ ತೇನ ಲಭ್ಯಃ**
**ತಸ್ಯೈಷ ಆತ್ಮಾ ವಿವೃಣುತೇ ತನೂಂಸ್ವಾಮ್**

(ಕ. ೧.೨.೨೨; ಮುಂ. ೩.೨.೩)

**ಧಾತುಃ ಪ್ರಸಾದಾತ್ ಮಹಿಮಾನಮಾತ್ಮನಃ।** (ಕ. ೧.೨.೨೦)

**ಅಸ್ಯ ಮಹತೋ ಭೂತಸ್ಯ ನಿಃಶ್ವಸಿತಂ ಯದೇತದ್ ಋಗ್ವೇದೋ ಯಜುರ್ವೇದಃ......।** (ಬೃ.೪.೫.೧೧)

ಮನುಷ್ಯಪ್ರಯತ್ನದಿಂದ ಅನೇಕ ವಿಜ್ಞಾನಸಿದ್ಧಿಗಳಾಗಿರುವುದನ್ನು ನಾವು ಕಂಡಿದ್ದೇವೆ, ಅಥವಾ ಕೇಳಿದ್ದೇವೆ, ಅಥವಾ ಕಂಡುಕೇಳಬಹುದಾಗಿದೆ. ನ್ಯೂಟನ್ (Newton) ಡಾರ್ವಿನ್ (Darwin) ಐನ್‌ಸ್ಟೈನ್ (Einstein) ಮೊದಲಾದವರ ವಿಷಯದಲ್ಲಿ ರಹಸ್ಯವೇನೂ ಇಲ್ಲ. ಅವರು ಮಹಾ ಪ್ರತಿಭಾಶಾಲಿಗಳು. ಅವರ ಬಹುಕಾಲದ, ಸಂತತಪ್ರಯತ್ನದಿಂದ ವಿಜ್ಞಾನಕ್ಕೆ ಮಹಾಭಾಗ್ಯ ಲಭಿಸಿತು. ಸಾಹಿತ್ಯ, ಚರಿತ್ರೆ ಮೊದಲಾದ ಜ್ಞಾನಕ್ಷೇತ್ರಗಳಲ್ಲಿಯೂ ಹಾಗೆಯೇ. ಮನುಷ್ಯಚಮತ್ಕಾರದಿಂದಲೂ ಕುಶಲತೆಯಿಂದಲೂ ಜ್ಞಾನಾರ್ಜನೆಯಾಗಿ ಲೋಕಕ್ಕೆ ಜೀವನಾನುಕೂಲವಾಗಿರುವುದನ್ನು ನಾವೆಲ್ಲ ತಿಳಿದಿದ್ದೇವೆ.

ಆದರೆ ಅಲೌಕಿಕವಾದ ಆಧ್ಯಾತ್ಮಿಕಕ್ಷೇತ್ರದಲ್ಲಿ ಮನುಷ್ಯಯತ್ನ ಅಷ್ಟು ದೂರ ಸಾಗಲಾರದು. ಅಲ್ಲಿ ಬೇಕಾದದ್ದು ದೈವಪ್ರಸಾದ. ಅದಕ್ಕೆ ಯಾವ ವಿಧಿನಿರ್ಬಂಧಗಳೂ ಇಲ್ಲ. ಸ್ವಾಮಿಯು ಹೇಳುತ್ತಾನೆ; ದರ್ಶನ ಕೊಡುತ್ತಾನೆ. ಅಷ್ಟೇ ನಿಜ. ಭಗವಂತನ ಇಚ್ಛೆಗೆ ಯಾವ ತಡೆಯಾಗಲಿ, ಬಲಾತ್ಕಾರವಾಗಲಿ ಇಲ್ಲ. ಆತನ ಇಷ್ಟವೇ ನಿರ್ಣಾಯಕ. ಆತನ ಒಲವಿಗೆ ಕಾರಣ ಇಂಥದೆಂದು ಹೇಳಬಲ್ಲವರಾರೂ ಇಲ್ಲ.

# ೬. ವೇದದ ಪ್ರಯೋಜನ

ಮನುಷ್ಯಜೀವನವು ಪ್ರತ್ಯಕ್ಷ-ಅಪ್ರತ್ಯಕ್ಷದ್ರವ್ಯಗಳ ಸಮ್ಮಿಶ್ರಣ. ಮನುಷ್ಯನ ಬಾಳು ಮೋಡ ಬೀರಿದ ಮಿಂಚಿನಂತೆ, ಮಿಂಚಿನ ಹಿಂದಿನ ಬಾಳು ಆಕಾಶದಲ್ಲಿ ಅಡಗಿ ಕೊಂಡಿರುತ್ತದೆ. ಮಿಂಚಿನ ಮುಂದಿನ ಬಾಳು ಹಾಗೆಯೇ ಮೇಘಮಂಡಲದಲ್ಲಿ ಲೀನ ವಾಗಿ ಹೋಗುತ್ತದೆ. ಒಂದರೆಕ್ಷಣ ಮಾತ್ರ ಮಿನುಗಿ ಮಾಯವಾದ ಆ ಮಿಂಚಿನ ಕಾರ್ಯವಾದರೋ ನಮ್ಮ ಕಣ್ಣಿಗೆ ವಿಸ್ಮಯಜನಕವಾಗುತ್ತದೆ. ಆ ಒಂದರೆಕ್ಷಣದ ಪರಿಣಾಮ ನಮಗೆ ದೊಡ್ಡ ಅನುಭವವಾಗುತ್ತದೆ. ಮನುಷ್ಯನ ಜೀವನವೂ ಹಾಗೆಯೇ. ಹೀಗೆ ಸ್ವಲ್ಪ ದೃಷ್ಟವಾಗಿ, ಸ್ವಲ್ಪ ಅದೃಷ್ಟವಾಗಿ ರಹಸ್ಯಾಶ್ಚರ್ಯಮಯ ವಾಗಿರುವ ಘಟನೆ ಮನುಷ್ಯಜೀವನ. ಅದು ಎಷ್ಟು ಮಾತ್ರ ದೃಶ್ಯವಾಗಿದೆಯೋ ಅಷ್ಟು ಮಾತ್ರ ಕಣ್ಣು ಕಿವಿ ಕೈಕಾಲು ಮೊದಲಾದ ಇಂದ್ರಿಯಕರಣಗಳಿಗೆ ಗ್ರಾಹ್ಯವಾಗಿರುತ್ತದೆ. ಎಷ್ಟು ಮಾತ್ರ ಅದೃಶ್ಯವೋ ಅಲ್ಲಿ ಅವನ ಕರಣಗಳ ಸಾಹಸವು ನಿಷ್ಪ್ರಯೋಜಕವಾಗಿ ಅಲ್ಲಿ ಬೇರೆ ತೆರದ ಸಾಧನ ಬೇಕಾಗುತ್ತದೆ. ಈ ದೇಹಕರಣಾತೀತವಾದ ಅದೃಶ್ಯ ಜೀವನಾಂಗವಿಚಾರವೇ ವೇದಕ್ಕೆ ಸೇರಿದ್ದು. ಈ ವಿಚಾರವೇ ಪರಮಾರ್ಥ. ಎಲ್ಲ ದೃಶ್ಯಜಗತ್ತಿಗೂ, ನಮ್ಮ ಮನಸ್ಸಿಗೆ ಗೋಚರಿಸುವ ಎಲ್ಲ ಪ್ರಭುಶಕ್ತಿಗಳಿಗೂ ಮೂಲ ಭೂತವಾಗಿ, ಅದೃಶ್ಯವಾಗಿ ಒಂದಾನೊಂದು ಮಹಾಭೂತವಿರುತ್ತದೆ ಎಂಬುದನ್ನು ನಾವು ಒಪ್ಪುವುದಾದರೆ ಆ ಆದಿಮಹಾಭೂತವೇ ಪರಮಾರ್ಥ. ಅದೇ ಪರತತ್ತ್ವ. ಹೀಗೆ ಮನುಷ್ಯಜೀವನ ಘಟನೆಯಲ್ಲಿ ಎರಡು ವಿಭಾಗಗಳು. ಒಂದು ಪರಮಾರ್ಥದ್ದು, ಇನ್ನೊಂದು (ಉಳಿದದ್ದು) ವ್ಯವಹಾರದ್ದು.

ಎಲ್ಲಿ ನಮ್ಮ ಇಂದ್ರಿಯಗಳು ಪ್ರವೇಶಿಸಲಾರವೋ ಅಲ್ಲಿ ನಮ್ಮ ಬುದ್ಧಿ ಪ್ರವೇಶಿಸ ಲಾರದು. ಕಣ್ಣು ಕಿವಿಗಳು ಒಂದಾನೊಂದು ಸ್ಥಳಕ್ಕೆ ಪ್ರವೇಶಿಸಲಾಗದಿದ್ದರೂ ಆ ಸ್ಥಳದ ದೃಶ್ಯಗಳೂ ಶಬ್ದಗಳೂ ಅವುಗಳ ಅನುಭವಕ್ಕೆ ಸಿಕ್ಕುವುದುಂಟು. ಆಕಾಶದಿಂದ ನಮ್ಮ ಕಣ್ಣಿಗೆ ಕೆಲವು ಹೊಳಪುಗಳು ಕಾಣುತ್ತವೆ. ಮನೆಯೊಳಗಿನ ಬೆಳಕಿನ ಹೊಳಪೂ ಕಾಣುತ್ತದೆ. ಆದರೆ ಮನೆಯ ಬೆಳಕಿನ ಬತ್ತಿ ಎಣ್ಣೆಗಳನ್ನು ನಮ್ಮ ಕಣ್ಣು ಕಾಣಬಲ್ಲವು. ನಮ್ಮ ಕೈಗಳು ಹಿಡಿಯಬಲ್ಲವು. ಆದದ್ದರಿಂದ ನಮ್ಮ ಬುದ್ಧಿ ಎಣ್ಣೆಬತ್ತಿಗಳಿಗೂ ದೀಪದ ಇತರ ಉಪಕರಣಗಳಿಗೂ ಇರುವ ಕಾರ್ಯಕಾರಣಸಂಬಂಧವನ್ನು ಗ್ರಹಿಸಿ ನಿಶ್ಚಯಿಸ ಬಲ್ಲದು. ಆದರೆ ಆಕಾಶದಲ್ಲಿಯ ಹೊಳಪಿನ ಹಿಂದೆ ಏನಿದೆಯೆಂಬುದನ್ನು ನಮ್ಮ ಕಣ್ಣು ಹುಡುಕಲಾರದು. ಆದದ್ದರಿಂದ ನಮ್ಮ ಬುದ್ಧಿ ಮನೆಯ ಬೆಳಕಿನ ವಿಷಯದಲ್ಲಿ ಕೆಲಸಮಾಡಿದಷ್ಟು ನಿಷ್ಕರ್ಷೆಯಿಂದ ಆಕಾಶಮಂಡಲದಲ್ಲಿ ಕೆಲಸಮಾಡಲಾರದು.

ಭೂಲೋಕದಲ್ಲಿ ಮದ್ದಲೆಯ ಸದ್ದನ್ನು ನಾವು ಬಲ್ಲೆವು. ಮದ್ದಲೆಯ ಚರ್ಮದ ದಪ್ಪಕ್ಕೂ ಹರವಿಗೂ ಕೈಪೆಟ್ಟಿನ ಬಲಕ್ಕೂ ಇರುವ ಸಂಬಂಧವನ್ನು ನಮ್ಮ ಬುದ್ಧಿ ಅಳೆದು ನಿಶ್ಚಯಿಸಲಾದೀತು; ಆಕಾಶದ ಗುಡುಗೂ ನಮ್ಮ ಮದ್ದಲೆಯ ಶಬ್ದದಂತೆಯೇ ನಮ್ಮ ಕಿವಿಗೆ ಗೋಚರಿಸುತ್ತದೆ. ಆದರೆ ಅದರ ಕಾರಣಾಂಶಗಳ ಪರಿಮಾಣವನ್ನು ನಿಶ್ಚಯಿಸುವುದು ನಮಗೆ ಅಷ್ಟು ಸುಲಭವಲ್ಲ. ಜೀವನವೆಂಬ ಇಂದ್ರಿಯಗೋಚರಘಟನೆಯ ಪರಾಮರ್ಶೆಯಲ್ಲಿಯೂ ಬುದ್ಧಿಯ ಶಕ್ತಿಯು ಸಾಲದೆಂಬುದು ಅನುಭವದಿಂದ ಸ್ಪಷ್ಟವಾಗಿದೆ. ಆದಕಾರಣ ನಮ್ಮ ಜೀವನಕ್ಷೇತ್ರದಲ್ಲಿ ನಮ್ಮ ಇಂದ್ರಿಯಕರಣಗಳಿಗೆ ಗ್ರಾಹ್ಯವಿಲ್ಲದಿರುವಷ್ಟರಮಟ್ಟಿಗೆ ವೇದವು ನಮಗೆ ಸಹಕಾರಿಯಾಗುತ್ತದೆ. ಯಾವುದು ನಮ್ಮ ಜೀವನವೆಂಬ ಮಿಂಚಿಗೆ ಹಿನ್ನೆಲೆಯಾದ ಮೋಡದಂತಿರುತ್ತದೆಯೋ — ಎಂದರೆ ಜೀವನದ ಆದಿಯೂ ಪರಿಣಾಮವೂ ಎಲ್ಲಿರುತ್ತದೆಯೋ ಮತ್ತು ಜೀವನರಂಗದಲ್ಲಿ ನಮ್ಮಿಂದ ಆಟವಾಡಿಸಿ ನಮ್ಮೊಡನೆ ಆಟವಾಡುವ ಎಲ್ಲ ಶಕ್ತಿಗಳೂ ಎಲ್ಲಿಂದ ಸಿಡಿಲು ಸುಳಿಗಾಳಿಗಳಂತೆ ಅಕಾರಣವೆನಿಸಿ ನಮ್ಮಲ್ಲಿಗೆ ಬರುತ್ತವೆಯೋ ಆ ಇಂದ್ರಿಯದೂರವಾದ ಮಹಾಭೂತದ ವಿಷಯದಲ್ಲಿ ವೇದವಾಕ್ಯೇ ನಮ್ಮ ಪಾಲಿಗೆ ಹಿರಿಯರ ಮಾತಿನಂತೆ ಮಾರ್ಗದರ್ಶಕವಾಗಿರುತ್ತದೆ. ಎಲ್ಲೆಲ್ಲಿ ಮನುಷ್ಯಬುದ್ಧಿ ತಾನೇ ಸ್ವಶಕ್ತಿಯಿಂದಲೇ ಕೆಲಸ ಮಾಡಬಲ್ಲುದೋ ಅಲ್ಲಿ ವೇದದ ಅಪೇಕ್ಷೆ ಇರಬೇಕಾದ್ದಿಲ್ಲ. ಹೊಟ್ಟೆಯಲ್ಲಿ ಹಸಿವುಂಟೇ ಇಲ್ಲವೇ ಎಂಬುದಕ್ಕಾಗಲಿ, ನಾಲಗೆಗೆ ಬೆಲ್ಲ ಸರಿಯೇ ಮೆಣಸು ರುಚಿಯೇ ಎಂಬುದಕ್ಕಾಗಲಿ ವೇದವಾಕ್ಯವನ್ನು ಹುಡುಕಬೇಕಾದದ್ದಿಲ್ಲ. ಜೀವನವ್ಯಾಪಾರದ ನೂರಾರು ಕ್ರಿಯೆಗಳು ನಮ್ಮಲ್ಲಿ ಸಹಜವಾಗಿಯೇ ಇರುವ ಹಲವಾರು ಪ್ರಕೃತಿವಾಸನೆಗಳಿಂದ ಉಂಟಾಗತಕ್ಕವು. ಹಸಿವು, ನೀರಡಿಕೆ, ನಿದ್ರೆ, ಅಂಜಿಕೆ, ಪ್ರೀತಿ, ಮಾತ್ಸರ್ಯ, ರೋಷ, ಆಶ್ಚರ್ಯಾನುಭವ, ಸಂತೋಷ ಇತ್ಯಾದಿ ಅನೇಕ ಪ್ರಕೃತಿಪ್ರೇರಣೆಗಳೇ ಜೀವನವ್ಯಾಪಾರದಲ್ಲಿಯ ಮುಪ್ಪಾಗಪಾಲು ಸಾಮಗ್ರಿ. ಅವು ಬುದ್ಧಿಯೊಡನೆ ಸೇರಿಕೊಂಡು ತಮಗೆ ತಕ್ಕ ಸಾಧನಗಳನ್ನೂ ಉಪಾಯಗಳನ್ನೂ ತಾವು ತಾವೇ ಕಲ್ಪಿಸಿಕೊಳ್ಳುತ್ತವೆ. ಇಲ್ಲಿ ವೇದದ ಸಹಾಯವೇನೂ ಅಷ್ಟಾಗಿ ಬೇಕಿಲ್ಲ. ಈ ದೇಹಪ್ರಕೃತಿಕ್ರಿಯೆಗಳನ್ನು ಮೀರಿದ ವಿಚಾರಗಳಲ್ಲಿ ಮಾತ್ರವೇ ವೇದಕ್ಕೆ ಸಲ್ಲುವ ಪ್ರಾಮಾಣ್ಯ. ಈ ಪ್ರಾಮಾಣ್ಯ ವ್ಯಾಪ್ತಿಯ ಪರಿಮಿತಿಯನ್ನು ಗಮನದಲ್ಲಿರಿಸಿಕೊಳ್ಳುವುದು ನಮ್ಮ ವಿಚಾರಕ್ಕೆ ಅವಶ್ಯವಾದ ಮೂಲನಿಬಂಧನೆ.

ಹೀಗೆ ಮಿತವ್ಯಾಪ್ತಿಯುಳ್ಳ ಈ ವೇದಪ್ರಾಮಾಣ್ಯಕ್ಕೆ ಇನ್ನೂ ಒಂದು ಉಪಾಧಿ ಅಥವಾ ಮಿತಿ ಉಂಟು. ಅದೇನೆಂದರೆ ಪರಮಾರ್ಥನಿಶ್ಚಯದಲ್ಲಿಯೂ ಧರ್ಮಾ

ಧರ್ಮನಿರ್ಣಯದಲ್ಲಿಯೂ ವೇದಾರ್ಥವು ನಮ್ಮ ಸ್ವತಂತ್ರವಿಚಾರದೊಡನೆ ಸಮನ್ವಯ ಪಡೆಯಬೇಕೆಂಬುದು.

ವೇದವೆಂಬುದು ಮನುಷ್ಯಪ್ರಾಣಿಯಲ್ಲಿ ಸ್ವತಸ್ಸಿದ್ಧವಾಗಿರುವ ಬುದ್ಧಿಚೈತನ್ಯದ ಪರಂಪರಾಭಿವೃದ್ಧಿಯ ವಾಙ್ಮಯರೂಪವೆಂದು ಮೇಲೆ ಹೇಳಿದೆವಷ್ಟೆ. ಈ ದೃಷ್ಟಿಯಿಂದ ವೈದಿಕವಾಙ್ಮಯದಲ್ಲಿ ಶ್ರುತಿ ಮಾತ್ರವೇ ಅಲ್ಲದೆ ತತ್ಸಂಬಂಧಿಗಳಾದ ಸ್ಮೃತಿಗಳೂ ಪುರಾಣಗಳೂ ವ್ಯಾಕರಣ-ಜ್ಯೋತಿಶ್ಶಾಸ್ತ್ರಾದಿ ನಾನಾವೇದಾಂಗಗಳೂ ಸಾಮುದಾಯಿಕವಾಗಿ ಸೇರಿರುತ್ತವೆ. ಈ ಒಟ್ಟು ಶ್ರುತಿಶಾಸ್ತ್ರ ಸಮುದಾಯದಲ್ಲಿ ಮನುಷ್ಯಬುದ್ಧಿ ಅನಾದಿಕಾಲದಿಂದ ಬೆಳೆಸಿಕೊಂಡುಬಂದಿರುವ ಪರಮಾರ್ಥ ಪ್ರಜ್ಞೆಯು ಮೂರ್ತೀಭವಿಸಿರುತ್ತದೆ. ಅಲ್ಲಿಂದೀಚಿನವರಾದ ನಾವು ಅದೇ ಪರಮಾರ್ಥ ವಿಚಾರದಲ್ಲಿ ನಡೆಸುವ ತರ್ಕವು ಆ ಪ್ರಾಚೀನತರ್ಕವನ್ನು ಬಿಟ್ಟಿರಬಾರದು; ಮತ್ತು ಆ ಪ್ರಾಚೀನತರ್ಕದ ಅನ್ವಯ ಸಹ ಈಗಿನ ತರ್ಕವನ್ನು ನಿರಾಕರಿಸಲಾಗದು. ಅಂದರೆ ಈಗಿನ ಪರಮಾರ್ಥಜಿಜ್ಞಾಸುವಿಗೆ ಇರುವ ಕರ್ತವ್ಯವು ಸಮನ್ವಯರೂಪವಾದದ್ದು. ಅವನು ಶ್ರುತಿತತ್ತ್ವವನ್ನು ಅರಿತುಕೊಳ್ಳಬೇಕು. ಪ್ರಕೃತಲೋಕದ ಜ್ಞಾನಾಭಿವೃದ್ಧಿಯನ್ನೂ ಗಮನದಲ್ಲಿರಿಸಿಕೊಳ್ಳಬೇಕು. ಅವೆರಡಕ್ಕೂ ಎಲ್ಲಿ ವಿರೋಧವೆಂಬುದನ್ನು ಹುಡುಕಬೇಕು. ಆ ವಿರೋಧಸ್ಥಾನವು ನಿಜವಾಗಿಯೂ ಪರಮಾರ್ಥವಿಚಾರಕ್ಕೆ ಸಂಬಂಧಪಟ್ಟದ್ದಾಗಿ ಅಪರಿಹಾರ್ಯವಾಗಿದ್ದಲ್ಲಿ ಅಲ್ಲಿ ಮಾತ್ರ ಅವನು ನೂತನಾಭಿಪ್ರಾಯವನ್ನು ಪುನರ್ವಿಮರ್ಶೆಗೋಸ್ಕರ ಇರಿಸಿಕೊಂಡು ಸದ್ಯದ ಅನುಷ್ಠಾನದಲ್ಲಿ ಸಂಪ್ರದಾಯವನ್ನು ಪಾಲಿಸುವುದು ಉಚಿತ.

ವೇದದಲ್ಲಿ ಅಡಕವಾಗಿರುವ ಪರಮಾರ್ಥಜ್ಞಾನವು ಅನಾದಿಯಾದದ್ದು ಎಂಬುದನ್ನು ನೀವು ಒಪ್ಪದೆ ಹೋದರೂ ಅದು ಸಾವಿರಾರು ವರ್ಷಗಳಿಂದ ಬಹುಜನಾಂಗೀಕೃತವಾಗಿ ಬೆಳೆದು ಬಂದಿರುವ ಜ್ಞಾನಭಂಡಾರವೆಂಬುದನ್ನು ನೀವು ಒಪ್ಪದಿರಲಾಗದು. ಈ ಬಹುದೀರ್ಘವಾದ ಕಾಲವಿಸ್ತಾರದಲ್ಲಿ ಸಾವಿರಾರು ತಲೆಮಾರುಗಳು ಆಗಿಹೋಗಿವೆ. ಮನುಷ್ಯವ್ಯಕ್ತಿಗಳು ಹುಟ್ಟಿ ಸತ್ತಿದ್ದಾರೆ. ಆದರೆ ಮನುಷ್ಯಬುದ್ಧಿ ಅನುಸ್ಯೂತವಾಗಿ ಬೆಳೆದುಬಂದಿದೆ. ಒಂದು ಋಷಿಸಂತಾನಪಂಕ್ತಿಯ ಬುದ್ಧಿಕಾರ್ಯವು ಮತ್ತೊಂದು ವಿದ್ವತ್ಸಂತಾನಪಂಕ್ತಿಯ ಕಾರ್ಯಕ್ಕೆ ಆಧಾರವಾಗಿ ಬಂದಿದೆ. ಹೀಗೆ ಮನುಷ್ಯನ ಬುದ್ಧಿಕಾರ್ಯವು ಅವಿಚ್ಛಿನ್ನವಾಗಿ ರಾಶಿಗೂಡಿರುವಾಗ, ನೂತನಬುದ್ಧಿಕಾರ್ಯದಿಂದ ಆ ಪುರಾತನಜ್ಞಾನಕ್ಕೆ ಭಂಗಬಾರದೆ ಇದ್ದಲ್ಲಿ — ಅತೀಂದ್ರಿಯವೂ ರಹಸ್ಯವೂ ಆದ ತತ್ತ್ವವಿಚಾರದಲ್ಲಿ ನಿಃಸ್ವಾರ್ಥರೂ ನಿರಹಂಕಾರಿಗಳೂ ತಪೋನಿಷ್ಠರೂ ಆಗಿದ್ದ ಪ್ರಾಚೀನಮಹರ್ಷಿಗಳ ಅನುಭವದರ್ಶನವೇ ನಮಗೆ

ಪ್ರಬಲಪ್ರಮಾಣವಾಗತಕ್ಕದ್ದೆಂದು ನಿರ್ಣಯಿಸುವುದರಲ್ಲಿ ಬುದ್ಧಿಸ್ವಾತಂತ್ರ್ಯಕ್ಕೆ ಹಾನಿಯಾಯಿತೆಂದೇನೂ ಹೇಳುವಂತಿಲ್ಲ. ಮನುಷ್ಯಕುಲಗಳೂ ಜಾತಿವರ್ಗಗಳೂ ಸಂತಾನಪಂಕ್ತಿಗಳೂ ವ್ಯವಹಾರರೀತಿಗಳೂ ಜೀವಿತಪರಿಸ್ಥಿತಿಗಳೂ ವಿಧವಿಧವಾಗಿ ಇರಬಹುದು. ಆದರೆ ಬುದ್ಧಿಚೈತನ್ಯವೆಂಬುದು ಒಂದೇ ಅಖಂಡಶಕ್ತಿ. ಅದಕ್ಕೆ ಕಾಲಭೇದದಿಂದಲೂ ಬಾಧೆಯಿಲ್ಲ, ಸ್ಥಳಭೇದದಿಂದಲೂ ಬಾಧೆಯಿಲ್ಲ. ಕಾಲದೇಶಗಳ ಬಾಧೆಯನ್ನು ಮೀರಿ ಸಮಸ್ತಮಾನವಬುದ್ಧಿಚೈತನ್ಯವೂ ಏಕಾಕಾರವಾಗಿ ಎದ್ದುನಿಂತು ಯಾವ ಒಂದು ತತ್ತ್ವವನ್ನು ಮೂಲಸತ್ಯವೆಂದು ಅಂಗೀಕರಿಸಲಾಗುತ್ತದೆಯೋ ಅದೇ ಪರಮಾರ್ಥ. ಇಂಥ ಪರಮಾರ್ಥದ ನಿಷ್ಕರ್ಷೆಯಲ್ಲಿ ಒಂದೆರಡು ವರ್ಷಗಳ ಅಥವಾ ಒಂದೆರಡು ತಲೆಮಾರುಗಳ ಯುಕ್ತಿಗಿಂತ ಸಹಸ್ರಾರು ವರ್ಷಗಳಿಂದ ಬಂದ ಸಿದ್ಧಾಂತವು ಪ್ರಬಲವೆಂದು ನಂಬುವುದೂ ಅದಕ್ಕನುಗುಣವಾಗಿ ನೂತನಯುಕ್ತಿಯ ಆಧಾರಜ್ಞಾನವನ್ನು ಪುನಃ ಪುನಃ ಪರಿಶೋಧನೆಗೊಳಪಡಿಸುವುದೂ ಬುದ್ಧಿಯ ಸತ್ಯನಿಷ್ಠೆಗೆ ಲಕ್ಷಣವಾಗಿರುತ್ತದೆ.

ಜೀವನಕ್ಷೇತ್ರದಲ್ಲಿ ಪಾರಮಾರ್ಥಿಕ ಮತ್ತು ವ್ಯಾವಹಾರಿಕ ಎಂಬ ಎರಡು ವಿಭಾಗಗಳು ಉಂಟೆಂದು ಮೇಲೆ ಹೇಳಿದೆವಷ್ಟೆ? ಈ ವಿಭಾಗಗಳು ಸಂಕೇತಮಾತ್ರದವು. ವಾಸ್ತವದಲ್ಲಿ ಅವೆರಡೂ ಬೇರೆಬೇರೆಯಲ್ಲ; ಒಂದೇ ವಸ್ತುವಿನ ಎರಡು ಅವಸ್ಥೆಗಳು ಮಾತ್ರ. ಮರವೂ ಅದರ ಬೀಜವೂ ಬೇರೆ ಬೇರೆ ವಸ್ತುಗಳಲ್ಲ. ಮರದ ಸತ್ತ್ವವೆಲ್ಲ ಬೀಜದಲ್ಲಿ ಅಡಗಿರುತ್ತದೆ. ಬೀಜದಲ್ಲಿಯ ಸಾರವೆಲ್ಲ ಮರವಾಗಿ ರೂಪುಗೊಳ್ಳುತ್ತದೆ. ನಮ್ಮ ಜೀವನದಲ್ಲಿ ಪ್ರತ್ಯಕ್ಷವಾದ ಭಾಗವೂ ಪರೋಕ್ಷವಾದ ಭಾಗವೂ ಹಾಗೆ ಪರಸ್ಪರ ಅವಿನಾಸಂಬಂಧವುಳ್ಳವು. ದೃಶ್ಯವಾಗಿರುವುದು ಅದೃಶ್ಯವಾದದ್ದರ ಒಂದು ವಿಶೇಷ ವಿಕಾಸ: ಕಣ್ಣಿಗೆ ಕಾಣುವ ನೀರು ಕಣ್ಣಿಗೆ ಕಾಣದ ಆವಿಯ ರೂಪಾಂತರವಾಗಿರುವಂತೆ ಅಥವಾ ಮಂಜು ಆವಿಯಾಗಿ ರೂಪಬದಲಾಯಿಸುವಂತೆ. ಹೀಗೆ ನಮ್ಮ ದೃಶ್ಯಜೀವನವನ್ನು ಆಳತಕ್ಕದ್ದು ಒಂದು ಅದೃಶ್ಯ ಜೀವನಮೂಲ. ಅದೇ ಅದೃಷ್ಟ. ಹೀಗಿರಲಾಗಿ ನಮ್ಮ ದೃಶ್ಯಜೀವನ ನೆಟ್ಟಗಾಗಬೇಕಾದರೆ ಅದನ್ನು ಅದೃಶ್ಯದ ಪರಿಜ್ಞಾನದಿಂದ ತಿದ್ದುತ್ತಿರಬೇಕು. ಲೌಕಿಕ ಜೀವನದ ಪ್ರಭುವು ಅಲೌಕಿಕವಾದ ಅದೃಷ್ಟಶಕ್ತಿ. ಲೋಕದಲ್ಲಿ ಜಾಣನಾದ ಆಳು ತನ್ನೊಡೆಯನ ಇಂಗಿತವನ್ನರಿತು ನಡೆದುಕೊಳ್ಳುವಂತೆ, ಪಾಚಕನು ಯಜಮಾನನ ಅಭಿರುಚಿಯನ್ನರಿತು ಅಡಿಗೆಮಾಡುವಂತೆ, ಮನುಷ್ಯನ ದೃಶ್ಯಜೀವನ ಅವನಿಗೆ ಊಹ್ಯಮಾತ್ರವಾದ ಅದೃಶ್ಯಶಕ್ತಿಯ ಸ್ವಭಾವವನ್ನು ಅನುಸರಿಸಬೇಕು. ಅಂಥ ಅನುಸರಣೆಯೇ ಧರ್ಮ. ಆದದ್ದರಿಂದಲೇ ವೇದವಾಕ್ಯದಲ್ಲಿ ವೈದಿಕರಿಗಿರುವ ಪರಮಶ್ರದ್ಧೆ.

ಹೀಗೆಂದಮೇಲೆ, ಕೇವಲ ಪರಮಾರ್ಥಜ್ಞಾನಲಾಭಕ್ಕಾಗಿಯೇ ವೇದಕ್ಕೆ ನಾವು ಇಷ್ಟು ಅತಿಶಯವಾಗಿ ಬೆಲೆ ಕೊಡಬೇಕಾದದ್ದು — ಎಂದಾಯಿತು. ಹಾಗಾದಮೇಲೆ, ಪರಮಾರ್ಥವಿಚಾರದೃಷ್ಟಿಯಿಂದಲೇ ನಾವು ವೇದಗ್ರಂಥದ ಎಲ್ಲ ಭಾಗಗಳಿಗೂ ಬೆಲೆ ಕಟ್ಟುತ್ತ ಹೋಗಬೇಕಾಗುತ್ತದೆ. ಹಾಗೆ ಬೆಲೆ ನಿಶ್ಚಯಿಸುವುದಾದರೆ, ವೇದದ ನಾನಾ ಭಾಗಗಳಲ್ಲಿ ತಾರತಮ್ಯಭಾವನೆ ಅನಿವಾರ್ಯವಾಗಿರುತ್ತದೆ. ಈ ಅರ್ಥವೈವಿಧ್ಯ-ವ್ಯತ್ಯಾಸಗಳೇ ವೇದಗ್ರಂಥದ ರಚನೆಯು ನಾನಾಕಾಲಗಳಲ್ಲಿ ನಾನಾಮುಖಗಳಲ್ಲಿ ಆದದ್ದೆಂಬ ಅನುಮಾನಕ್ಕೆ ಕಾರಣವಾಗುತ್ತದೆ. ವೇದದ ಕೆಲವು ಭಾಗವು ಪರಮಾರ್ಥ ವಿಚಾರದ ಪ್ರಾರಂಭ ಭಾಗ; ಇನ್ನು ಕೆಲವು ಭಾಗವು ಸಿದ್ಧಾಂತದ ಭಾಗ; ಇನ್ನು ಕೆಲವು ಭಾಗ ಉಭಯಕ್ಕೂ ಮಧ್ಯಸ್ಥವಾದ ಅವಾಂತರಭಾಗ. ಈ ಭಾಗ ವ್ಯವಸ್ಥೆಯನ್ನು ನಾವು ದೃಷ್ಟಿಯಲ್ಲಿರಿಸಿಕೊಂಡು, ವೇದವಾಙ್ಮಯದ ಸಾರಾಂಶವನ್ನು ತಿಳಿದುಕೊಳ್ಳ ಬೇಕು. ಪೂರ್ವದಿಂದ ಸಂಪ್ರದಾಯವಾಗಿ ಬಂದಿರುವ ಸಂಹಿತೆ, ಬ್ರಾಹ್ಮಣ, ಆರಣ್ಯಕ, ಉಪನಿಷತ್ತು ಎಂಬ ವಿಭಾಗವ್ಯವಸ್ಥೆ ಅದಕ್ಕನುಗುಣವಾಗಿಯೇ ಇದೆ.

ಸಂಹಿತೆಯೆಂಬ ವೇದಭಾಗವನ್ನು ಪ್ರಾರಂಭ ಭಾಗವೆಂದೂ, ಉಪನಿಷತ್ತುಗಳನ್ನು ಸಿದ್ಧಾಂತ ಭಾಗವೆಂದೂ, ಬ್ರಾಹ್ಮಣವೆಂಬುದನ್ನೂ ಆರಣ್ಯಕವನ್ನೂ ಈ ಎರಡು ಭಾಗಗಳ ನಡುವಣ ಸೇತುವೆಯೆಂದೂ ಸ್ಥೂಲವಾಗಿ ಪರಿಗಣಿಸಬಹುದಾಗಿದೆ. ಉಪನಿಷತ್ತೇ ವೇದಾಂತ, ಎಂದರೆ, ವೇದದ ಕಡೆಯ ತೀರ್ಮಾನ. ಈ ಕಡೆಯ ತೀರ್ಮಾನದ ದೃಷ್ಟಿಯಿಂದ ವೇದದ ಉಳಿದ ಎಲ್ಲ ಭಾಗಗಳಿಗೂ ಅರ್ಥನಿರ್ಣಯ ಮಾಡುವುದು ಯುಕ್ತವಾಗುತ್ತದೆ. ಈ ವೇದಾಂತಸಿದ್ಧಾಂತವೆಂಬುದು ಒಂದು ಪ್ರಕಾರದ್ದೇನೂ ಅಲ್ಲವೆಂಬುದು ನಿಜ. ವೇದಾಂತಮತವೆಂಬುದರಲ್ಲೇ ಹಲವು ಪ್ರಭೇದಗಳುಂಟು. ಹಾಗಿದ್ದರೂ ನಾವು ಆ ಮತಪ್ರಭೇದಗಳ ಕಡೆಗೆ ಸದ್ಯಕ್ಕೆ ಗಮನ ತಿರುಗಿಸಬೇಕಾದದ್ದಿಲ್ಲ. ಪ್ರಕೃತಕ್ಕೆ ವೇದಾಂತದ ಎಲ್ಲ ಮತಪ್ರಭೇದಗಳನ್ನೂ ಸಾಮೂಹಿಕವಾಗಿ ಜೀವೇಶ್ವರವಿಚಾರದ ಒಂದು ಪ್ರಕರಣವೆಂದು ಇರಿಸಿಕೊಂಡು, ಉಳಿದ ವೇದಭಾಗಗಳನ್ನು ಮೊದಲು ಪರ್ಯಾಲೋಚಿಸಬಹುದು.

ವೇದದ ನಿರ್ಮಿತಿಕಾಲವನ್ನು ನಮ್ಮ ರೂಢಿಯ ಕಾಲಮಾನ ರೀತಿಯಲ್ಲಿ ಗುಣಿಸಿ ಹೇಳುವುದು ಸಾಧ್ಯವಾಗಿದ್ದಿದ್ದರೆ ನಮ್ಮ ವೈದಿಕಭಾವನೆಗಳ ಆವಿರ್ಭಾವಕ್ರಮದ ಚರಿತ್ರೆಯನ್ನು ತಿಳಿಯುವುದು ಸುಲಭವಾಗುತ್ತಿತ್ತು. ಅಂಥ ಭಾವನೆಗಳ ಚರಿತ್ರೆಯನ್ನು ಕಾಣುವುದು ಸಾಧ್ಯವಾಗಿದ್ದಿದ್ದರೆ ನಮ್ಮ ಇಂದಿನ ಅನೇಕ ಶಾಸ್ತ್ರವಿಧಿಸಂಪ್ರದಾಯಗಳ ಅಂತರ್ಭಾವವನ್ನು ನಿಷ್ಕರ್ಷೆಯಾಗಿ ತಿಳಿದು ಬೆಲೆಕಟ್ಟುವುದು ಸಾಧ್ಯವಾಗಿರುತ್ತಿತ್ತು.

ವೇದವು ಹಿಂದೂಜನದ ಪ್ರಕೃತಜೀವನಕ್ಕೆ ಮಾರ್ಗದೀಪಕವಾಗಿದೆ. ಸಮಸ್ತ ಪ್ರಪಂಚದಲ್ಲಿ ಅತ್ಯಂತ ಪುರಾತನವಾದದ್ದನ್ನು ಅತ್ಯಂತನೂತನವಾದದ್ದರ ಜೊತೆಗೆ ತಗುಲಿಸಿರುವ ತಂತು ಯಾವುದೆಂದರೆ ಭಾರತೀಯರ ವೇದವಾಙ್ಮಯ. ಸೃಷ್ಟಿಯ ಅರ್ಥ, ಜೀವಗಳ ಸ್ವರೂಪ, ಜಗಜ್ಜೀವಿಗಳ ಪರಸ್ಪರ ಸಂಬಂಧ, ಅಮಾನುಷಶಕ್ತಿಗಳ ಪ್ರಭಾವ, ಜೀವನದ ವಿವಿಧ ವಿಶಾಲ ಧರ್ಮ — ಈ ನಾನಾ ಪ್ರಶ್ನೆಗಳನ್ನು ಕುರಿತು ಅನಾದಿಕಾಲದಿಂದ ಬೆಳೆದುಬಂದಿರುವ ಚರ್ಚೆ-ಚಿಂತನೆಗಳನ್ನೂ ಊಹಾಪೋಹ ಗಳನ್ನೂ ಅಖಂಡವಾಗಿ ತನ್ನೊಳಗೆ ಸೇರಿಸಿಕೊಂಡು ಪರಿಪುಷ್ಟವಾಗಿರುವ ವಾಙ್ಮಯವು ವೇದವನ್ನು ಬಿಟ್ಟರೆ ಮತ್ತಾವುದೂ ಲೋಕದಲ್ಲಿಲ್ಲ. ಇತರ ಪ್ರಾಚೀನತಾತ್ತ್ವಿಕವಾಙ್ಮಯಗಳು ಲೋಕದಲ್ಲಿ ಇಲ್ಲವೆಂದಿಲ್ಲ. ಚೀನೀಯರೂ ಈಜಿಪ್ಶಿಯನರೂ ಗ್ರೀಕರೂ ಜ್ಞಾನಸಂಪಾದನೆಯಲ್ಲಿ ಪರಿಶ್ರಮಿಸಿದವರೇ. ಆದರೆ, ಅವರ ಧಾರ್ಮಿಕಸಾಹಿತ್ಯ ಈ ಹೊತ್ತು ವೇದದಂತೆ ಜೀವಂತವಾಗಿಲ್ಲ. ಆ ದೇಶಗಳ ಪ್ರಾಚೀನಸಾಹಿತ್ಯಗಳಿಗೆ ಇರುವ ಬೆಲೆ ಒಂದು ಬಗೆಯದು. ವೇದಕ್ಕೆ ಇರುವ ಬೆಲೆ ಎರಡು ಬಗೆಯದು. ಗ್ರೀಸ್, ಈಜಿಪ್ಟ್, ಚೀನಾಗಳ ಧಾರ್ಮಿಕಗ್ರಂಥಚರಿತ್ರೆ ಪೂರ್ವಕಾಲಕ್ಕೆ ಮಾತ್ರ ಸಂಬಂಧಪಟ್ಟದ್ದು. ವೇದದ ಚರಿತ್ರೆ ಪೂರ್ವಕಾಲಕ್ಕೂ ಪ್ರಕೃತ ಕಾಲಕ್ಕೂ ಕೂಡ ಸಂಬಂಧಪಟ್ಟದ್ದು. ಅದ್ಯಾಪಿ ಭಾರತೀಯರ ಅನುದಿನದ ಜೀವನ ದಲ್ಲಿ ವಿನಿಯುಕ್ತವಾಗಿ, ಇತಃಪರ ಅವರ ಜೀವನಪ್ರಕಾಶದ ಮೂಲಕ ಇತರ ದೇಶಗಳ ಜೀವನದಲ್ಲಿ ವಿನಿಯುಕ್ತವಾಗಬೇಕಾಗಿ ಇರುವ ಪ್ರಭಾವವು ವೇದ ವಾಙ್ಮಯದ್ದು. ಆದಕಾರಣ, ವೇದದ ನಾನಾ ಭಾಗ-ವಿಭಾಗಗಳ ರಚನೆಯ ಕಾಲ ವನ್ನೂ ಅಥವಾ ಆವಿರ್ಭಾವಕಾಲವನ್ನೂ ನಿಷ್ಕರ್ಷಿಸಲು ನಮಗೆ ಪ್ರಮಾಣಭೂತ ವಾದ ಸಾಧನಗಳಿಲ್ಲದಿರುವುದು ಒಂದು ದೊಡ್ಡ ಕೊರತೆ.

ಆದದ್ದರಿಂದ ವೇದವಾಙ್ಮಯದ ಅಭಿವೃದ್ಧಿಯ ಚರಿತ್ರೆಯನ್ನು ನಾವು ಸ್ಥೂಲವಾಗಿ ಅರ್ಥದ ಅಥವಾ ಭಾವನೆಗಳ ದೃಷ್ಟಿಯಿಂದ ಊಹೆ ಮಾಡಬೇಕಾಗಿದೆ.

ವೇದವು ಪ್ರಪಂಚದ ಮತಧರ್ಮಗ್ರಂಥಗಳಲ್ಲೇ ಗಾತ್ರದಲ್ಲಿ ಅತ್ಯಂತ ವಿಸ್ತಾರ ವಾದದ್ದು. ಅದರಲ್ಲಿಯ ವಾಕ್ಯಗಳು ಋಕ್ಕುಗಳೆಂದೂ ಅನುವಾಕಗಳೆಂದೂ ಸೂಕ್ತ ಗಳೆಂದೂ ಮಂತ್ರಗಳೆಂದೂ ಹಲವು ತೆರನಾಗಿವೆ. ಈ ನಾನಾ ವಿಧದ ವಾಕ್ಯ ಪ್ರಭೇದಗಳ ರಚನೆಯೂ ವಿವಿಧವಾಗಿದೆ. ಅವುಗಳ ವಿಷಯಗಳೂ ಹಾಗೆಯೇ. ಮತ್ತು ಭಾವಗಳೂ ಸಹ ಹಾಗೆಯೇ ನಾನಾ ಪ್ರಕಾರದ್ದಾಗಿವೆ. ಹೀಗೆ ರೂಪ ನಾನಾತ್ವವನ್ನೂ ಭಾವನಾನಾತ್ವವನ್ನೂ ನೋಡಿದರೆ ವೇದವೆಂಬುದು ಯಾರೋ

ಒಬ್ಬರಿಬ್ಬರು ಸೇರಿ ಕೃತ್ರಿಮದಿಂದ ನಿರ್ಮಾಣ ಮಾಡಿದ ಗ್ರಂಥವೇನೂ ಅಲ್ಲ ವೆಂಬುದೂ, ಅದು ಸ್ವತಂತ್ರರಾಗಿ ತತ್ತ್ವವಿಚಾರ ಮಾಡಿದ ಬಹುಮಂದಿಯ ವಾಗ್ಗುಂಫನವೆಂಬುದೂ ತೋರಿಬರುತ್ತದೆ; ಮತ್ತು ಹೀಗೆ ಹತ್ತಾರು ಮನುಷ್ಯ ಬುದ್ಧಿಗಳ ಕಾರ್ಯವಾಗಿ ಅಭಿಪ್ರಾಯಭೇದಗಳೂ ಮತಭೇದಗಳೂ ಹತ್ತಾರು ಕಂಡು ಬಂದರೂ ಸಿದ್ಧಾಂತಭಾಗದಲ್ಲಿ ಅವೆಲ್ಲ ಪರಸ್ಪರ ಅಸಮಂಜಸಗಳಾಗದೆ ಹೊಂದಿಕೆಗೆ ಸಿಕ್ಕುವಂತೆ ಇರುವುದರಿಂದ ಅವನ್ನು ಭ್ರಾಂತಮನುಷ್ಯರು ಮನಸ್ವೀ ಹರಟಿದ ಅಸಂಬದ್ಧವಾದ ಅಪಲಾಪವೆಂದು ಯಾರೂ ತಿರಸ್ಕರಿಸುವಂತಿಲ್ಲ. ಒಂದೇ ಅಭೀಷ್ಟದಿಂದ ಪ್ರೇರಿತರಾಗಿ ಒಂದೇ ತತ್ತ್ವವನ್ನು ಹುಡುಕಲು ಹೊರಟು, ಹುಡುಕಾಟದ ಅವಸರದಲ್ಲಿ ಇತ್ತತ್ತ ಅಲೆದು ಬೇರೆ ಬೇರೆ ಹೋಗಿದ್ದರೂ ಪರ್ಯವಸಾನದಲ್ಲಿ ಒಂದೇ ಕಡೆಗೆ ಬಂದು ಸೇರಿದವರ ಮಾತುಕಥೆಯಂತೆ ಇರುತ್ತವೆ ನಾನಾಮಹರ್ಷಿಗಳ ಮುಖದಿಂದ ಹೊರಟ ವೇದವಾಕ್ಕುಗಳು. ಅವರೆಲ್ಲರೂ ಒಂದೇ ಪರ್ವತದ ಪಾದಪ್ರಾಂತದಿಂದ ಒಂದೇ ಶಿಖರವನ್ನು ದೃಷ್ಟಿಯಲ್ಲಿಟ್ಟು ಬೆಟ್ಟ ಹತ್ತಿದವರು. ಹತ್ತುತ್ತ ಹತ್ತುತ್ತ ಒಬ್ಬರಿಂದೊಬ್ಬರು ಅಗಲಿ ಬೇರೆ ಬೇರೆ ಕಾಡು-ಕಣಿವೆಗಳಲ್ಲಿ ನುಗ್ಗಿ ಆಗಾಗ ತಲೆ ಮೇಲಕ್ಕೆತ್ತಿ ಶಿಖರವನ್ನು ಗುರುತಿಸುತ್ತ ಪುನಃ ಪುನಃ ಕಾಡಿನಲ್ಲಿ ನುಗ್ಗಿ ಹೊಸ ಹೊಸ ದಾರಿಗಳನ್ನು ಮಾಡಿಕೊಳ್ಳುತ್ತಾ ಅತಿಪ್ರಯಾಸದಿಂದ ಮೇಲಕ್ಕೇರಿ ಉದ್ದಿಷ್ಟವಾದ ಕೋಡುಗಲ್ಲನ್ನು ಮುಟ್ಟಿದವರು ಆ ಮಹರ್ಷಿಗಳು. ಅವರ ಸಂಚಾರದಲ್ಲಿ ಪ್ರಾರಂಭಸ್ಥಾನವೂ ಗಮ್ಯಸ್ಥಾನವೂ ಒಂದು. ಭಿನ್ನತೆ ತೋರುವುದು ಮಧ್ಯಮಾರ್ಗದಲ್ಲಿ ಮಾತ್ರ.

ವೇದಗಳನ್ನು ರಚಿಸಿದವರು ವೇದವ್ಯಾಸರಲ್ಲವಾದರೂ ವೇದಗಳ ಒಟ್ಟು ರಾಶಿ ಯನ್ನು—ಎಂದರೆ, ಭಾಗ-ಭಾಗವಾಗಿ ವ್ಯಾಕೃತವಾಗದೆ, ಒಂದು ಅವ್ಯಾಕೃತ ರಾಶಿಯಾಗಿ ಒಟ್ಟು ಗುಡ್ಡೆಯಾಗಿದ್ದುದನ್ನು ವಿಭಾಗಮಾಡಿ ವ್ಯವಸ್ಥೆಪಡಿಸಿದವರು ಕೃಷ್ಣದ್ವೈಪಾಯನರು. ಅವರನ್ನೇ ನಾವು ವೇದವ್ಯಾಸರೆಂದು ಕರೆಯುವುದು. ಅವರೇ ಶ್ರೀಮನ್ಮಹಾಭಾರತವನ್ನು ರಚಿಸಿದ ಮಹಾಕವಿಗಳು; ಮತ್ತು ಮಹಾಪುರುಷರು. ಅವರ ವೃತ್ತಾಂತವನ್ನು ಅವರ ಮಹಾಕೃತಿಯಾದ ಮಹಾಭಾರತದ ಶಾಂತಿಪರ್ವ, ಮೋಕ್ಷಪರ್ವಗಳಲ್ಲಿ ಹೀಗೆ ಹೇಳಿದೆ (ಅಧ್ಯಾಯ ೩೫೦):

ವ್ಯಾಸರು (ಬಾದರಾಯಣರು) ಸತ್ಯವತೀ-ಪರಾಶರರ ತನುಜರು. ಸತ್ಯವತಿಗೆ ಮೊದಲು ಮತ್ಸ್ಯಗಂಧಿ ಎಂಬ ಹೆಸರಿತ್ತು. ಆಕೆ ಒಬ್ಬ ಅಂಬಿಗನ ಮಗಳು. ಪರಾಶರರು ಮಹಾಮಹರ್ಷಿಗಳು. ಅವರು ಒಂದು ದಿನ ಗಂಗಾನದಿಯಲ್ಲಿ ಪ್ರಯಾಣ ಮಾಡುತ್ತಾ ದೋಣಿಯಲ್ಲಿ ತನ್ನನ್ನು ಮುಂದಕ್ಕೆ ಕರೆದುಕೊಂಡು ಹೋಗಲು

ಆ ದೋಣಿಯ ಅಂಬಿಗಿತ್ತಿಯಾಗಿದ್ದ ಮತ್ಸ್ಯಗಂಧಿಯನ್ನು ಕೇಳಿದರು. ಆಗ ಆಕೆಯನ್ನು ಕಂಡು ಅವರಿಗೆ ಮೋಹವುಂಟಾಯಿತು. ಆದರೆ ಆಕೆ ಒಡಂಬಡಲಿಲ್ಲ. ತನ್ನ ತಂದೆಯನ್ನು ಕೇಳಬೇಕೆಂದಳು. ಪರಾಶರರು ಆಗ ಆ ಅಂಬಿಗನನ್ನು ಒಡಂಬಡಿಸಿ ಆಕೆಯನ್ನು ಸ್ವೀಕಾರಮಾಡಿದರು. ಹಾಗೆ ಸ್ವೀಕಾರಮಾಡುವ ಮುಂಚೆ ಆಕೆಗೆ ಮತ್ಸ್ಯಗಂಧಿ ಎಂಬ ಹೆಸರಿಗೆ ಬದಲಾಗಿ ಯೋಜನಗಂಧಿ ಎಂದು ಹೆಸರು ಕೊಟ್ಟರು. ತಾವು ಹೋಗುತ್ತಿದ್ದ ಕಡೆ ದ್ವೀಪವಾಗಿದ್ದ ಕಾರಣದಿಂದ ಆ ದ್ವೀಪದಲ್ಲಿ ಹುಟ್ಟಿದ ಮಗುವಿಗೆ ದ್ವೈಪಾಯನ ಎಂದು ನಾಮಕರಣ ಮಾಡಿದರು. ಮಗುವು ಬಣ್ಣದಲ್ಲಿ ಕರಿಯದಾಗಿದ್ದದ್ದರಿಂದ 'ಕೃಷ್ಣದ್ವೈಪಾಯನ' ಎಂದು ಹೆಸರಾಯಿತು. ಆಕಾರದಲ್ಲಿ ಆ ಕೃಷ್ಣದ್ವೈಪಾಯನರು ಎತ್ತರವಾಗಿದ್ದರು.

**ಅಭ್ರಶ್ಯಾಮಃ ಪಿಂಗಜಟಾಬದ್ಧಕಲಾಪಃ**
**ಪ್ರಾಂಶುರ್ದಂಡೀ ಕೃಷ್ಣಮೃಗತ್ವಕ್‌ಪರಿಧಾನಃ ।**
**ಸರ್ವಾನ್ ಲೋಕಾನ್ ಪಾವಯಮಾನಃ ಕವಿಮುಖ್ಯಃ**
**ಪಾರಾಶರ್ಯಃ ಸರ್ವಸ್ವರೂಪಂ ವಿವೃಣೋತು ॥**

ಇದು ವೇದವ್ಯಾಸರ ಮೈಯ ಲಕ್ಷಣ. ಈ ವೇದವ್ಯಾಸರೇ ವೇದವಿಭಾಗಕರ್ತರು. ಬಹುಶಃ ಅಪಾರವಾಗಿದ್ದ ವೇದರಾಶಿಯನ್ನು ಒಂದು ಆಕಾರಕ್ಕೆ ತಂದು ಅದರ ಈಗಿನ ರೂಪದಲ್ಲಿ ಅದನ್ನು ಲೋಕಕ್ಕೊದಗಿಸಿದವರು ವೇದವ್ಯಾಸರು. ಅವರ ಆನುಪೂರ್ವಿ ಹೀಗೆ ಇದೆ:

**ವ್ಯಾಸಂ ವಸಿಷ್ಠನಪ್ತಾರಂ ಶಕ್ತೇಃ ಪೌತ್ರಂ ಅಕಲ್ಮಶಂ ।**
**ಪರಾಶರಾತ್ಮಜಂ ವಂದೇ ಶುಕತಾತಂ ತಪೋನಿಧಿಂ ॥**

ಶ್ರೀವೇದವ್ಯಾಸರ ಮಗನಾದ ಶುಕಮಹರ್ಷಿಯೇ ಪರೀಕ್ಷಿದ್ರಾಜನಿಗೆ ಭಾಗವತ ವನ್ನು ಉಪದೇಶಿಸಿದ್ದವನು.

# ೭. ಭಗವದ್ಭಕ್ತಿ ವೈಭವ

ಮನುಷ್ಯದೇಹವನ್ನು ಪಾಂಚಭೌತಿಕವಸ್ತುವೆಂದು ಕರೆಯುವ ರೂಢಿ ಎಲ್ಲರಿಗೂ ತಿಳಿದದ್ದು. ಪಂಚಭೂತಗಳು ಇವು:

(೧) ಪೃಥ್ವಿ

(೨) ಅಪ್ಪು (ಆಪಃ = ನೀರು)

(೩) ತೇಜಸ್ಸು (ತೇಜಃ = ಪ್ರಕಾಶ ಮತ್ತು ಉಷ್ಣ)

(೪) ವಾಯು

(೫) ಆಕಾಶ

ಇವುಗಳ ಮಿಶ್ರಣದಿಂದ ದೇಹ. ಎಲ್ಲ ಪ್ರಾಣಿಗಳ ದೇಹಗಳೂ ಇವುಗಳ ಮಿಶ್ರಣ. ಈ ಐದರಲ್ಲಿ ಮೂರನ್ನು ಅತಿಮುಖ್ಯವಾದದ್ದೆಂದೆಣಿಸಿ ಪುರುಷನು ತೇಜೋऽಬನ್ನ ಮಯನೆಂದು ಛಾಂದೋಗ್ಯಾದಿ ಉಪನಿಷತ್ತುಗಳು ಹೇಳಿರುತ್ತವೆ. ತೇಜಸ್ಸು, ನೀರು, ಇವು ಅತ್ಯಂತಮುಖ್ಯವಾದವು. ಇವೇ ದ್ಯಾವಾಪೃಥ್ವೀ ಅಥವಾ ಭೂಮ್ಯಂತರಿಕ್ಷಗಳು.

ಮನುಷ್ಯನು ಇವೆರಡನ್ನು ಅನುದಿನವೂ ಸಂತತವಾಗಿ ನೋಡುತ್ತಿರುತ್ತಾನೆ. ಎಂದರೆ, ಬೆಳಕು ಭೂಮಿಗಳೇ ಅವನ ಜೀವಾಳಸ್ಥಾನ, ಅವೆರಡರ ಸಂಯೋಗದ ಪರಿಣಾಮ.

ತೇಜಃಸ್ಥಾನವಾದ ಸೂರ್ಯಾದಿಗ್ರಹಗಳ ಕಾರ್ಯಾಂಶಗಳನ್ನು ಯಜುರ್ವೇದದ ಅರುಣಾಧ್ಯಾಯವು ವರ್ಣಿಸುತ್ತದೆ. ಸೂರ್ಯಾದಿಗ್ರಹಗಳು ಕಾಲಕ್ಕೆ ಉಪಲಕ್ಷಣ. ಆ ಗ್ರಹಗಳಿರುವುದರಿಂದ ಕಾಲಗಣನೆ ಮತ್ತು ಋತುಪರಿವರ್ತನೆ.

**ಸ್ಮೃತಿಃ ಪ್ರತ್ಯಕ್ಷಮೈತಿಹ್ಯಮ್ ।**
**ಅನುಮಾನಶ್ಚತುಷ್ಟಯಮ್ ॥**
**ಏತೈರಾದಿತ್ಯಮಂಡಲಂ ।**
**ಸರ್ವೈರೇವ ವಿಧಾಸ್ಯತೇ ॥**

ಹೀಗೆ ನಕ್ಷತ್ರಮಂಡಲದ ನಾನಾವ್ಯತ್ಯಾಸಗಳನ್ನು 'ಅರುಣ'ವು ಬಣ್ಣಿಸುತ್ತದೆ. ಪಿತೃ ಕಾರ್ಯದಲ್ಲಿ ಅರುಣಾನುವಾಕದ ಕೆಲವು ಮಂತ್ರಗಳು ಬರುತ್ತವೆ:

**ರುದ್ರಾಣಾಮಾದಿತ್ಯಾನಾಗ್ಂ ಸ್ಥಾನೇ ಸ್ವತೇಜಸಾ ಭಾನಿ....**

ಹೀಗೆಂದರೆ ಮೃತನಾದ ಜೀವನು ಆದಿತ್ಯಲೋಕದಲ್ಲಿ ತನ್ನ ಪುಣ್ಯವಿಶೇಷದಿಂದ ಪ್ರಕಾಶಿಸುವಂಥವನಾಗಲಿ — ಎಂದರ್ಥ. ಈ ಅನುವಾಕಗಳು ಕಿವಿಗೂ ಮನಸ್ಸಿಗೂ

ಗಂಭೀರ ಭಾವೋದ್ರೇಕವನ್ನುಂಟುಮಾಡುವುದಾಗಿವೆ. ಅರುಣಾನುವಾಕಗಳನ್ನು ಸೂರ್ಯ ನಮಸ್ಕಾರದ ವೇಳೆಯಲ್ಲಿ ಹೇಳುವುದು ವಾಡಿಕೆ. ಒಟ್ಟಿನ ಮೇಲೆ 'ಅರುಣ'ವು ಸೂರ್ಯನ ವಿವಿಧಮಹಿಮೆಗಳನ್ನು ಸಂದರ್ಭೋಚಿತವಾದ ವರ್ಣಸ್ವರ ಗಳಿಂದಲೂ, ಉದಾತ್ತ-ಅನುದಾತ್ತಗಳಿಂದಲೂ ಶ್ರವಣೇಂದ್ರಿಯಕ್ಕೆ ಸಮುನ್ನತಿಕಾರಕ ವಾಗಿ ಹೇಳುವುದಾಗಿ ಜನಪ್ರಿಯವಾಗಿದೆ.

ಪಂಚಭೂತಗಳಲ್ಲಿ ಇನ್ನೊಂದಾದ ಅಪ್ಪಿನ — ಎಂದರೆ ನೀರಿನ ಮಹಿಮೆಯನ್ನೂ ಮತ್ತು ಜನವೇದ್ಯವಾದ ತೃಣ-ಸಸ್ಯ-ಧಾನ್ಯಗಳ ಮಹಿಮೆಯನ್ನೂ ತಿಳಿಸುವುದು ರುದ್ರಾಧ್ಯಾಯ. ಇದೂ ಮನುಷ್ಯಜೀವನಪೋಷಕವಾದ ಒಂದು ಮಹಾಭೂತದ ಪ್ರಶಂಸೆ.

ಒಂದು ಸಂಗತಿಯನ್ನು ಇಲ್ಲಿ ವಿಶೇಷವಾಗಿ ನಾವು ಗಮನಿಸಬೇಕಾದದ್ದು. ಅರುಣಾನುವಾಕಗಳಲ್ಲಿ ಹೇಗೋ ರುದ್ರಾಧ್ಯಾಯದಲ್ಲಿ ಹಾಗೆಯೇ ಭಗವಂತನ ಭಯಂಕರಸ್ವರೂಪವನ್ನು ಕುರಿತು ಹೇಳಿದೆ:

**ನಮೋ ರುದ್ರೇಭ್ಯೋ ಯೇ ಪೃಥಿವ್ಯಾಂ ....**

ಈಶ್ವರನು ನಮಗೆ ಅನ್ನೋದಕಗಳನ್ನು ಕೊಟ್ಟು ಕಾಪಾಡುವಂತೆ ರೋಗರುಜಿನ ಗಳನ್ನು ತಂದು, ಯುದ್ಧಕಾರಣಗಳನ್ನು ಒದಗಿಸಿ ನಮ್ಮ ಮೃತ್ಯುವಿಗೂ ಕಾರಣ ನಾಗುತ್ತಾನೆ. ಇಲ್ಲಿ ನಾವು ಧ್ಯಾನಿಸುವುದು ಪರಮಾತ್ಮನ ಆ ಭಯಂಕರ ಲೀಲೆಗಳನ್ನು.

**ಸಹಸ್ರಾಣಿ ಸಹಸ್ರಶೋ ಯೇ ರುದ್ರಾ ಅಧಿ ಭೂಮ್ಯಾಂ**
**ತೇಷಾಗ್‌ಂ ಸಹಸ್ರಯೋಜನೇಽವ ಧನ್ವಾನಿ ತನ್ಮಸಿ**
**ಅಸ್ಮಿನ್ಮಹತ್ಯರ್ಣವೇಽಂತರಿಕ್ಷೇ ಭವಾ ಅಧಿ**
**ನೀಲಗ್ರೀವಾಶ್ಶಿತಿಕಂಠಾಃ ... ...**

ಪರಮಾತ್ಮನು ಪರಮಮಂಗಳಸ್ವರೂಪಿ, ಸಾಮಾನ್ಯವಾಗಿ ಆತನು ನಮಗೆ ಸೌಮ್ಯಾಕಾರಗಳಲ್ಲಿ ಕಾಣಿಸಿಕೊಳ್ಳುತ್ತಾನೆ. ಎಳೆಬಿಸಿಲು, ತಿಳಿನೀರು, ಹೊಳೆ-ಹೊಳೆವ ಹಸುರಿನ ಹುಲ್ಲುಗರಿಕೆ, ಬರುವ ಫಲ ವೃಕ್ಷ — ಇಂಥ ಅವತಾರಗಳಲ್ಲಿ ಭಗವಚ್ಛಕ್ತಿ ನಮಗೆ ಅತ್ಯಂತ ಇಷ್ಟವಾದದ್ದು. ಇದು ಈಶ್ವರನ ಸಾಮಾನ್ಯಕಾರ್ಯ. ಆದರೆ, ಆತನು ಭಯಂಕರನೂ ಆಗುತ್ತಾನೆ. ಇವು ಸೂರ್ಯನಿಗೂ ಶಿವನಿಗೂ ಸುಲಭವಾದ ಅವತಾರಗಳು.

# ೮. ರುದ್ರಾಧ್ಯಾಯ

ಭಗವಂತನ ರುದ್ರಲೀಲೆಗಳನ್ನು ನಮ್ಮ ಸ್ಮರಣೆಗೆ ತಂದುಕೊಡುವ ವೇದಭಾಗಕ್ಕೆ ರುದ್ರಾಧ್ಯಾಯವೆಂದು ಹೆಸರು.

'ರುದ್ರ' ಎಂದರೆ ಭಯಪಡಿಸುವವನು, ಅಳಿಸುವವನು (ರೋದಯತೀತಿ ರುದ್ರಃ), ಅರಚಿಸುವವನು, ಕಿರಿಚಿಸುವವನು ಎಂದರ್ಥ.

ಮನುಷ್ಯನು ತನ್ನ ಜೀವನವನ್ನು ಸಾರ್ಥಕಪಡಿಸಿಕೊಳ್ಳಬೇಕೆಂದರೆ ಅವನು ಯಾವ ನೀತಿತತ್ತ್ವವನ್ನು ಅನುಸರಿಸಿ ನಡೆಯಬೇಕೋ ಆ ಮಹಾತತ್ತ್ವವನ್ನು ಅವನು ಮೂರು ಪ್ರಕಾರಗಳಲ್ಲಿ ಭಾವಿಸಿಕೊಳ್ಳಲಾಗುತ್ತದೆ ಎಂದು ವೇದಾಂತಮತ ಹೇಳುತ್ತದೆ.

(೧) ಜಗದ್ರೂಪವಾದದ್ದು — ಚರಾಚರಪ್ರಪಂಚಾತ್ಮಕವಾದದ್ದು: ಇದು ಕಾರ್ಯ ಬ್ರಹ್ಮ; (೨) ಈಶ್ವರ ರೂಪವಾದದ್ದು — ಜಗನ್ನಿಯಾಮಕವಾದದ್ದು: ಇದು ಕಾರಣ ಬ್ರಹ್ಮ; (೩) ನೀರೂಪವಾಗಿ ಸರ್ವಮೂಲವಾದದ್ದು — ಕಾರ್ಯಕಾರಣಾದಿ ದ್ವಂದ್ವ ಲಕ್ಷಣಗಳಿಲ್ಲದೆ, ನಿಷ್ಕ್ರಿಯವೂ ನಿರ್ಲಿಪ್ತವೂ ಆದದ್ದು; ಇದು ಶುದ್ಧಬ್ರಹ್ಮ. ಈ ಮೂರರಲ್ಲಿ ಮೊದಲನೆಯದೂ ಎರಡನೆಯದೂ ಮೂರನೆಯದರ ಬರಿಯ ಮೇಲ್ತೋರಿಕೆ; ಅವು ಬ್ರಹ್ಮಚೈತನ್ಯದ ನಾಮರೂಪಮಾತ್ರದ ಲೀಲಾವಿಕಾರಗಳು; ಅವೆರಡೂ ನಮ್ಮ ಇಂದ್ರಿಯಮನಸ್ಸುಗಳಿಗೆ ವಿಷಯವಾದವು, ಆದಕಾರಣ ಕೊಂಚ ಕೊಂಚ ಕಾಲದವು, ಕೆಲವು ಮಿತಿಗಳಿಗೆ ಒಳಪಟ್ಟವು. ಕಾಲ ದೇಶ ಸಂದರ್ಭಗಳ ಉಪಾಧಿಗೆ ಸಿಕ್ಕದೆ ಶಾಶ್ವತವೂ ಏಕರೂಪವೂ ಆಗಿರತಕ್ಕದ್ದು ಶುದ್ಧಬ್ರಹ್ಮ; ಅದು ಕೇವಲ ಸತ್ತ್ವ, ಅದೇ ಪರಮಾತ್ಮ. ಆದರೆ ಆ ನಿರ್ಗುಣತತ್ತ್ವದೆಡೆಗೆ ನಮ್ಮನ್ನು ಕರೆದು ಕೊಂಡು ಹೋಗುವ ದಾರಿಯಾದರೋ ಅದರ ಸಗುಣಾವತಾರಗಳ ನಡುವೆಯೇ ಇರುತ್ತದೆ. ಸಗುಣದ ಅಂತರಂಗವನ್ನರಿತ ಹೊರತು ನಮಗೆ ನಿರ್ಗುಣದ ಅರಿವಾಗ ಲಾರದು. ಸಾಕಾರದ ಹೊದಿಕೆಯನ್ನು ಬಿಚ್ಚಿದಲ್ಲದೆ ನಿರಾಕಾರದ ಸ್ವರೂಪ ಕಾಣದು. ಬ್ರಹ್ಮಚೈತನ್ಯದ ಸಾಕಾರವಿಭೂತಿಗಳ ಮರ್ಮವನ್ನು ನಮಗೆ ತಿಳಿಯಪಡಿಸುವುದು ರುದ್ರಾಧ್ಯಾಯದಿಂದಾಗುವ ಉಪಕಾರ.

ಈ ಪ್ರಪಂಚದಲ್ಲಿ ಸಂಪತ್ತನ್ನೂ ಸೌಂದರ್ಯವನ್ನೂ ಅನುಭವಿಸುವುದಕ್ಕಾಗಿ ನಮಗೆ ಯಾರೂ ಬೋಧನೆ ಮಾಡಬೇಕಾಗಿಲ್ಲ. ಪ್ರಕೃತಿಯೇ ಆ ಕೆಲಸವನ್ನು ಮಾಡುತ್ತಿದೆ. ಸುಖಕ್ಕಾಗಿ ಆಶೆಪಟ್ಟುಕೊಂಡಿರುವುದೇ ನಮ್ಮ ಸ್ವಭಾವ. ಭೋಗ

ಭಾಗ್ಯಗಳು ನಮಗೆ ಬಂದಾಗ ಅವನ್ನು ಭಗವಂತನ ಅನುಗ್ರಹವೆಂದು ಭಾವಿಸಿ ಸ್ವೀಕರಿಸತಕ್ಕದ್ದೆಂದರೂ ಅದರಿಂದ ನಮಗೆ ಹೆಚ್ಚಿನ ಪ್ರಯಾಸವಾಗದು. ನಮ್ಮ ಇಷ್ಟವನ್ನು ನೆರವೇರಿಸುವುದೇ ಅಲ್ಲವೆ ದೈವಕ್ಕೆ ನಾವು ನಿಯಮಿಸಿರುವ ಕರ್ತವ್ಯ! ಆದರೆ ಪ್ರಪಂಚದಲ್ಲಿ ನಮಗೆ ಬೇಕೆನ್ನಿಸಿದ್ದರ ಜೊತೆಗೆ ಬೇಡವೆನ್ನಿಸಿದ್ದು ಬಂದಿದೆ. ಐಶ್ವರ್ಯದ ಪಕ್ಕದಲ್ಲಿ ದಾರಿದ್ರ್ಯವಿರುತ್ತದೆ. ಬಲದ ಆಸರೆಯಲ್ಲಿ ದುರ್ಬಲವು ಅವಿತುಕೊಂಡಿರುತ್ತದೆ. ಸ್ನೇಹದ ಸಂಗಡ ಉಗ್ರವೂ ಬರುತ್ತದೆ. ನಾವು ಒಳ್ಳೆಯದು ಎಂದೆಣಿಸಿಕೊಂಡಿರುವುದೆಲ್ಲ ಕೆಟ್ಟದೆನ್ನಿಸಿರುವುದರೊಡನೆ ಬೆರೆತುಹೋಗಿರುತ್ತದೆ. ಹೀಗೆ ಪೀಡೆಯೂ ವಿಕಾರವೂ ನಮಗೆ ತಪ್ಪಿದ್ದಲ್ಲ. ಈ ಅನಿಷ್ಟಗಳು ಯಾರ ಕೆಲಸ? ಅವು ಬಂದಾಗ ಅವನ್ನು ಅಂಗೀಕರಿಸುವುದು ಹೇಗೆ? ಇಲ್ಲಿ ನಮ್ಮ ಮನಸ್ಸಿಗೆ ಒಂದು ಶಿಕ್ಷಣ (ತಯಾರಿ) ಅವಶ್ಯವಾಗುತ್ತದೆ. ಸೌಖ್ಯದಂತೆ ಸಂಕಟವೂ ಈಶ್ವರಾಜ್ಞೆಯೇ; ಸೂರ್ಯಚಂದ್ರರಲ್ಲಿ ಭಗವದಂಶವಿರುವಂತೆ ಕಲ್ಲು-ಕತ್ತಲುಗಳಲ್ಲಿಯೂ ಆ ಅಂಶ ವಿರುತ್ತದೆ. ಇಷ್ಟಕ್ಕಾಗಿ ನಾವು ಕೈ ಚಾಚುವಂತೆ ಕಷ್ಟಕ್ಕೆ ತಲೆಬಾಗುವುದಕ್ಕೂ ಸಿದ್ಧರಾಗಿರ ಬೇಕು. ಸುಷ್ಠುವಾದದ್ದರಂತೆ ದುಷ್ಟವಾದದ್ದೂ ಶಿವಲೀಲೆ. ಈ ತತ್ತ್ವವನ್ನು ಮನ ಮುಟ್ಟುವಂತೆ ಬೋಧಿಸುವುದಕ್ಕಾಗಿ ಹೊರಟಿರುವುದು ರುದ್ರಾಧ್ಯಾಯ.

ರುದ್ರಾಧ್ಯಾಯವೆಂಬುದು ಯಜುರ್ವೇದದ ಸಂಹಿತಾಭಾಗದಲ್ಲಿ ನಾಲ್ಕನೆಯ ಕಾಂಡದ ಐದನೆಯ ಮತ್ತು ಏಳನೆಯ ಪ್ರಪಾಠಕಗಳ ಸಂಕಲನ. ರುದ್ರನ 'ಶತ' ಅವತಾರಗಳ — ಎಂದರೆ ಲೆಕ್ಕವಿಲ್ಲದಷ್ಟು ನಾನಾ ರೂಪಗಳ ಸ್ಮರಣೆ ಈ ಪ್ರಕರಣದಲ್ಲಿರುವುದರಿಂದ ಇದಕ್ಕೆ ಶತರುದ್ರೀಯವೆಂದು ಹೆಸರುಂಟು.

ಈ ಅಧ್ಯಾಯದ ಮೊದಲ ಭಾಗದಲ್ಲಿ 'ನಮಃ' ಶಬ್ದ ಪದೇ ಪದೇ ಬರುತ್ತದೆಂಬ ಕಾರಣದಿಂದ ಅದನ್ನು ನಮಕವೆಂದೂ, ಎರಡನೆಯ ಭಾಗದಲ್ಲಿ 'ಚ ಮೇ' ಎಂದು ಮಾತು ಮಾತಿಗೂ ಪುನರುಕ್ತಿಯಿರುವುದರಿಂದ ಅದನ್ನು ಚಮಕವೆಂದೂ ಕರೆಯುವುದು ವಾಡಿಕೆ.

ರುದ್ರಲೀಲಾಸ್ಮರಣೆಯ ಮೂಲಕ ಇದು ಮನಸ್ಸಿಗೆ ಸುಖಾಸುಖ ಸಮತೆಯನ್ನು ಅಭ್ಯಾಸ ಮಾಡಿಸಿ ಶಾಂತಿಗೆ ದಾರಿ ಮಾಡಿ ಪರಬ್ರಹ್ಮಾನುಭವಕ್ಕೆ ಅವಕಾಶಮಾಡಿಸ ತಕ್ಕದ್ದಾದದ್ದರಿಂದ ರುದ್ರಾಧ್ಯಾಯವನ್ನು ರುದ್ರೋಪನಿಷತ್ತು ಎಂದೂ ಕರೆಯುವುದುಂಟು.

ರುದ್ರಾಧ್ಯಾಯದ ಶೈಲಿ ಮನೋಗ್ರಾಹಿಯಾದದ್ದು. ಓಜೋವಂತಗಳೂ ವೀರ್ಯ ದ್ಯೋತಕಗಳೂ ಆದ ಶಬ್ದಗಳು ಅದ್ಭುತಚಿತ್ರೋದ್ದೀಪಕಗಳಾಗುವಂತೆ ಸಮುದ್ರ ತರಂಗಧಾಟಿಯಲ್ಲಿ ಸಂಬದ್ಧವಾಗಿವೆ. ತಾರಸ್ಥಾಯಿಯ ಕಂಠಶುದ್ಧಿಯುಳ್ಳವರು ಈ

ವೇದಭಾಗವನ್ನು ವಿಹಿತಕ್ರಮದಲ್ಲಿ ಘೋಷಿಸಿದಾಗ ಕೇಳಿದವರ ಅಂತರಂಗಕ್ಕೆ ಒಂದು ನಿರ್ಮಲವಾತಾವರಣಸಂಸ್ಪರ್ಶವೂ ಒಂದು ಭಾವೋನ್ನತಿಯೂ ಲಭ್ಯವಾಗುತ್ತವೆ ಎಂಬುದು ನೂರಾರು ವರ್ಷಗಳ ನೂರಾರು ಮಂದಿಯ ಅನುಭವದ ಮಾತು.

ಆದದ್ದರಿಂದಲೇ ಶಿವಾಭಿಷೇಕಕಾಲದಲ್ಲಿಯೂ ನಿತ್ಯಪಾರಾಯಣದಲ್ಲಿಯೂ ರುದ್ರಾಧ್ಯಾಯ ಪಠನೆ ರೂಢಿಯಾಗಿ ಬಂದಿದೆ.

ಈ ರುದ್ರಾಧ್ಯಾಯದ ಮುಖ್ಯತಾತ್ಪರ್ಯವನ್ನು ಒಬ್ಬ ಪೂರ್ವಿಕರು ಹೀಗೆ ತಿಳಿಸಿದ್ದಾರೆ:

**ಭೀತಿರ್ನಾಸ್ತಿ ಭುಜಂಗಪುಂಗವವಿಷಾತ್**
**ಪ್ರೀತಿರ್ನ ಚಂದ್ರಾಮೃತಾತ್।**
**ನಾಶೌಚಂ ಹಿ ಕಪಾಲದಾಮಲುಲನಾತ್**
**ಶೌಚಂ ನ ಗಂಗಾಜಲಾತ್॥**
**ನೋದ್ವೇಗಶ್ಚಿತಿಭಸ್ಮನಾ**
**ನ ಚ ಸುಖಂ ಗೌರೀಸ್ತನಾಲಿಂಗನಾತ್।**
**ಆತ್ಮಾರಾಮತಯಾ ಹಿತಾಹಿತಸಮಃ**
**ಸ್ವಸ್ಥೋ ಹರಃ ಪಾತು ವಃ॥**

ಮಹಾಕವಿ ಕಾಳಿದಾಸನು ಇದೇ ಅಭಿಪ್ರಾಯವನ್ನೇ ಈ ಕೆಳಗಿನ ಶ್ಲೋಕದಲ್ಲಿ ಹೇಳಿದ್ದಾನೆ:

**ಏಕೈಶ್ವರ್ಯೇ ಸ್ಥಿತೋಽಪಿ ಪ್ರಣತಬಹುಫಲೇ ಯಸ್ಸ್ವಯಂ ಕೃತ್ತಿವಾಸಾಃ**
**ಕಾಂತಾಸಂಮಿಶ್ರದೇಹೋಽಪ್ಯವಿಷಯಮನಸಾಂ ಯಃ ಪರಸ್ತಾದ್ಯತೀನಾಮ್।**
**ಅಷ್ಟಾಭಿರ್ಯಸ್ಯ ಕೃತ್ಸ್ನಂ ಜಗದಪಿ ತನುಭಿರ್ಬಿಭ್ರತೋ ನಾಭಿಮಾನಃ**
**ಸನ್ಮಾರ್ಗಾಲೋಕನಾಯ ವ್ಯಪನಯತು ಸ ವಸ್ತಾಮಸೀಂ ವೃತ್ತಿಮೀಶಃ॥**

## ೯. ಉಪನಿಷತ್ತಿನ ವಿಷಯ

ಉಪನಿಷತ್ತಿನ ವಿಷಯ ಆತ್ಮ ಅಥವಾ ಬ್ರಹ್ಮ. ಅದು ರಹಸ್ಯವಸ್ತು. ಅದನ್ನು ನಮಗೆ ತಿಳಿಯಪಡಿಸುವ ಬಗೆ ಯಾವುದು? ಅದು ಮಾತಿನಿಂದಾದೀತೆ? ನಮ್ಮ ಮಾತು ನಮ್ಮ ಅನುಭವದಲ್ಲಿರುವ ಲೋಕಕ್ಕಾಗಿ ಹುಟ್ಟಿದ್ದು. ಹೀಗೆ ಪ್ರತ್ಯಕ್ಷಕ್ಕಾಗಿ ತಯಾರಾದ ಭಾಷೆಯಿಂದ ರಹಸ್ಯವನ್ನು ನಿರೂಪಿಸಲಾದೀತೆ? ಆತ್ಮವೆಂಬುದು ರೂಪ-ಗುಣ-ವಿಕಾರಗಳಿಲ್ಲದ್ದು; ಪ್ರಪಂಚವಾದರೋ ರೂಪ-ಗುಣ-ವಿಕಾರತನ್ಮಯ ವಾದದ್ದು. ಹೀಗೆ ಎರಡೂ ಅನ್ಯೋನ್ಯವ್ಯತಿರಿಕ್ತವಾಗಿರುವಲ್ಲಿ ಪ್ರಪಂಚಪ್ರಯುಕ್ತವಾದ ಸಾಧನವು ನಿಷ್ಪ್ರಾಪಂಚವಾದ ಆತ್ಮಕ್ಕೆ ಹೊಂದೀತೆ? ಲೋಕದ ಬಳಕೆಯ ಮಾತು ಲೋಕಾತೀತಕ್ಕೆ ಸಾಕಾದೀತೆ? ಭಾಷೆಯನ್ನು ಬಿಡೋಣವೆಂದರೆ ನಮಗೆ ಬೋಧನೋಪಕರಣ ಬೇರೆ ಯಾವುದೂ ಇಲ್ಲ. ಆದಕಾರಣ ಉಪನಿಷತ್ತು ನಮಗೆ ತಿಳಿದಿರುವ ಭಾಷೆಯನ್ನೇ ಉಪಾಯದಿಂದುಪಯೋಗಿಸಿ ತನ್ನ ಕಾರ್ಯವನ್ನು ಸಾಧಿಸಬೇಕಾಗಿದೆ. ಹಾಗೆ ಉಪನಿಷತ್ತು ಮಾಡಿಕೊಂಡಿರುವ ಉಪದೇಶೋಪಾಯ ಗಳಲ್ಲಿ ಮುಖ್ಯವಾದವು ನಾಲ್ಕು: ೧. ನಾಮಸಂಕೇತ ೨. ರೂಪಸಂಕೇತ ೩. ಕರ್ಮಸಂಕೇತ ೪. ಕಥಾಸಂಕೇತ

**೧. ನಾಮಸಂಕೇತ:** ಇದು ಓಮ್, ಹ್ರಾಂ, ಕ್ಲೀಂ — ಇಂಥಾ ಬೀಜಾಕ್ಷರಗಳ ಜಪದ ಮೂಲಕ ಅಥವಾ ಭೂಃ ಭುವಃ ಸುವಃ — ಇಂಥಾ ವ್ಯಾಹೃತಿಗಳೆಂಬ ಪದಗಳ ಮೂಲಕ ಉಪಾಸಕನು ಒಂದು ದೈವವನ್ನೋ ತತ್ತ್ವವನ್ನೋ ಕುರಿತು ಧ್ಯಾನ ಮಾಡುತ್ತ ತಲ್ಲೀನನಾಗುವ ಕ್ರಮ. ಉದಾಹರಣೆ:

**ಓಮಿತ್ಯೇಕಾಕ್ಷರಂ ಬ್ರಹ್ಮ। ಅಗ್ನಿರ್ದೇವತಾ।**
**ಓಮಿತಿ ಬ್ರಹ್ಮ। ಓಮಿತೀದಗ್ಂ ಸರ್ವಮ್॥**
**ಭೂರಿತಿ ವಾ ಅಯಂ ಲೋಕಃ। ಭುವ ಇತ್ಯನ್ತರಿಕ್ಷಂ॥**
**ಭೂರಿತಿ ವೈ ಪ್ರಾಣಃ। ಭುವ ಇತ್ಯಪಾನಃ॥**

- *ತೈತ್ತಿರೀಯ*

**ಮನೋ ಹಿಂಕಾರಃ। ವಾಕ್ಪ್ರಸ್ತಾವಃ॥**
**ಪೃಥಿವೀ ಹಿಂಕಾರಃ। ಅಂತರಿಕ್ಷಂ ಪ್ರಸ್ತಾವಃ॥**

- *ಛಾಂದೋಗ್ಯ*

**೨. ರೂಪಸಂಕೇತ:** ಉಪನಿಷತ್ತು ವೇದಭಾಗ; ವೇದಬ್ರಾಹ್ಮಣರಿಗೆ ತಿಳಿದಿದ್ದ ವಿದ್ಯೆ; ಬ್ರಾಹ್ಮಣರು ಆ ವೇದವನ್ನು ವಿನಿಯೋಗ ಮಾಡುತ್ತಿದ್ದದ್ದು ಯಜ್ಞಯಾಗಾದಿ

ಕರ್ಮಗಳಲ್ಲಿ. ಯಜ್ಞರೂಪವಾದ ಪೂಜಾಕ್ರಿಯೆಯೇ ಬ್ರಾಹ್ಮಣರಿಗಿದ್ದ ಉದ್ಯೋಗ — ಅದು ಅವರಿಗೆ ಚೆನ್ನಾಗಿ ಪರಿಚಿತವಾಗಿದ್ದ ಪ್ರಪಂಚ. ಆದ್ದರಿಂದ ವೇದವು ಯಜ್ಞಾಂಗವಾದ ವಸ್ತು ವ್ಯಾಪಾರಗಳನ್ನು ಜಗಚ್ಚೈತನ್ಯಗಳ ಪ್ರತೀಕಗಳಂತೆ — ಗುರುತುಗಳಂತೆ — ರೂಪಿಸಿ ರಹಸ್ಯತತ್ತ್ವವನ್ನು ದೃಷ್ಟಾಂತಪಡಿಸ ಹೊರಟಿರುತ್ತದೆ. ಉದಾಹರಣೆ:

**ಯತ್ಪುರುಷೇಣ ಹವಿಷಾ। ದೇವಾ ಯಜ್ಞಮತನ್ವತ।**
**ವಸಂತೋಽಸ್ಯಾಸೀದಾಜ್ಯಂ। ಗ್ರೀಷ್ಮ ಇಧ್ಮಶ್ಶರದ್ಧವಿಃ।**

*- ಪುರುಷಸೂಕ್ತ*

**ಉಷಾ ವಾ ಅಶ್ವಸ್ಯ ಮೇಧ್ಯಸ್ಯ ಶಿರಃ॥**

*- ಬೃಹದಾರಣ್ಯಕ*

**೨. ರೂಪಕ:** ಕಾವ್ಯಸಾಹಿತ್ಯದಲ್ಲಿ ರೂಪಕಾಲಂಕಾರವೆಂದು ಪ್ರಸಿದ್ಧವಾಗಿರುವ ಒಂದು ವಾಕ್ಪ್ರಕಾರವೂ ಉಪನಿಷತ್ತುಗಳಲ್ಲುಂಟು. ರೂಪಕವೆಂದರೆ ಎರಡು ವಸ್ತುಗಳಲ್ಲಿ ಒಂದು ವಸ್ತು ಇನ್ನೊಂದನ್ನು ಹೋಲುತ್ತಿದ್ದಲ್ಲಿ, ಆ ಒಂದು ಆ ಇನ್ನೊಂದೇ ಎಂದಾಗಲಿ, ಅಥವಾ ಆ ಇನ್ನೊಂದರಂತೆ ಎಂದಾಗಲಿ ವರ್ಣಿಸುವ ರೀತಿ. ಕನ್ನಡ ಜೈಮಿನಿಭಾರತದ ಮೊದಲನೆಯ ಪದ್ಯ —

**ಶ್ರೀವಧುವಿನಂಬಕ ಚಕೋರಕಂ ಮೆರೆಯೆ...**
**ಲಕ್ಷ್ಮೀರಮಣನಾಸ್ಯಚಂದ್ರನ್॥**

ಇಂಥಾ ವಾಕ್ಕು ವೇದದಲ್ಲಿ ಹೇರಳವಾಗಿ ಉಂಟು. ಉದಾಹರಣೆ:

**ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ॥**

*- ಈಶೋಪನಿಷತ್ತು*

**ಅಸೌ ವಾ ಆದಿತ್ಯೋ ದೇವ ಮಧು। ತಸ್ಯ**
**ದ್ಯೌರೇವ ಶಿರಶ್ಚೀನವಗ್‌ಶೋಽಂತರಿಕ್ಷಮಪೂಪಃ**

*- ಛಾಂದೋಗ್ಯ*

**ತಸ್ಯೈವಂ ವಿದುಷೋ ಯಜ್ಞಸ್ಯಾತ್ಮಾ ಯಜಮಾನಃ**
**ಶ್ರದ್ಧಾ ಪತ್ನೀ ಶರೀರಮಿಧ್ಮಗ್‌.... ಯನ್ಮರಣಂ**
**ತದವಭೃಥಃ॥**

*- ಮಹಾನಾರಾಯಣ*

**ಊರ್ಧ್ವಮೂಲೋಽವಾಕ್ಶಾಖ ಏಷೋಽಶ್ವತ್ಥಃ ಸನಾತನಃ॥**

*- ಕಠೋಪನಿಷತ್*

**೩. ಕರ್ಮಸಂಕೇತ:** ಯಜ್ಞಾಂಗಗಳಾದ ವಸ್ತುಕ್ರಿಯೆಗಳನ್ನು ಆಧ್ಯಾತ್ಮಿಕ ವಸ್ತುಕರ್ಮಗಳೆಂಬ ಭಾವನೆಯಿಂದ ನೋಡುವುದು. ಉದಾಹರಣೆ:

**ಲೋಕೇಷು ಪಂಚ ವಿಧಗ್‍ಂ ಸಾಮೋಪಾಸೀತ॥**

**ಸಪ್ತವಿಧಸ್ಯ ವಾಚಿ ಸಪ್ತವಿಧಗ್‍ಂ ಸಾಮೋಪಾಸೀತ॥**

*- ಛಾಂದೋಗ್ಯ*

**ಅನ್ನಂ ಬ್ರಹ್ಮೇತ್ಯುಪಾಸೀತ॥**

*- ತೈತ್ತಿರೀಯ*

**೪. ಕಥಾಸಂಕೇತ:** ಇದು ಉಪಾಖ್ಯಾನ-ಐತಿಹ್ಯಗಳ ದ್ವಾರಾ ರಹಸ್ಯಗಳನ್ನು ಸೂಚಿಸತಕ್ಕದ್ದು. ಉದಾಹರಣೆ:

**ಬ್ರಹ್ಮ ಹ ದೇವೇಭ್ಯೋ ವಿಜಿಗ್ಯೇ। ತಸ್ಯ ಹ**

**ಬ್ರಹ್ಮಣೋ ವಿಜಯೇ ದೇವಾ ಅಮಹೀಯನ್ತ॥**

*- ಕೇನೋಪನಿಷತ್ತು*

**ದ್ವಯಾ ಹ ಪ್ರಾಜಾಪತ್ಯಾ ದೇವಾಶ್ಚಾಸುರಾಶ್ಚ॥**

*- ಬೃಹದಾರಣ್ಯಕ*

**ಬಕೋದಾಲ್ಭ್ಯೋಗ್ಲಾವೋ ವಾ ಸ್ವಾಧ್ಯಾಯಮುದ್ವವ್ರಾಜ।**

**ತಸ್ಮೈ ಶ್ವಾ ಶ್ವೇತಃ ಪ್ರಾದುರ್ಬಭೂವ॥**

*- ಛಾಂದೋಗ್ಯ*

ಹೀಗೆ ಪರಿಪರಿಯಾದ ಪ್ರವಚನೋಪಾಯಗಳನ್ನು ಉಪಯೋಗಿಸಿಕೊಂಡಿದ್ದರೂ ವಿಷಯವನ್ನು ತಾನು ಪೂರ್ತಿಯಾಗಿ ಸ್ಪಷ್ಟಪಡಿಸಿದೆಯೆಂದು ಯಾವ ಉಪನಿಷತ್ತೂ ಹೇಳಿಕೊಂಡಿಲ್ಲ. ವಿಷಯದ ಸ್ವಭಾವ ಅಂಥಾದ್ದು.

ವೇದಗಳ ಸಮಾಪ್ತಿಭಾಗವೂ ಸಾರಾಂಶಭಾಗವೂ ಆಗಿ ವೇದಾಂತವೆಂದು ಅನ್ವರ್ಥ ನಾಮದಿಂದ ಪ್ರಸಿದ್ಧವಾಗಿರುವ ಉಪನಿಷತ್ತುಗಳು ಸಂಖ್ಯೆಯಲ್ಲಿ ಇಷ್ಟೇ ಎಂದು ಹೇಳುವ ಹಾಗಿಲ್ಲ. ಮುಕ್ತಿಕೋಪನಿಷತ್ತು ಎಂಬ ಗ್ರಂಥದಲ್ಲಿ ಅಷ್ಟೋತ್ತರ ಶತ ಉಪನಿಷತ್ತುಗಳ ಹೆಸರುಗಳು ಉದಾಹೃತವಾಗಿವೆ. ಮುಕ್ತಿಕೋಪನಿಷತ್ತು ಶ್ರೀರಾಮ ನಿಂದ ಹನುಮಂತನಿಗೆ ಉಪದಿಷ್ಟವಾದ್ದೆಂದು ಅದರಲ್ಲಿ ಹೇಳಿದೆ.

**ತಿಲೇಷು ತೈಲವದ್ವೇದೇ ವೇದಾಂತಸ್ಸುಪ್ರತಿಷ್ಠಿತಃ।। I-೯**
**ಋಗ್ವೇದಾದಿ ವಿಭಾಗೇನ ವೇದಾಃ ಚತ್ವಾರ ಈರಿತಾಃ।**
**ತೇಷಾಂ ಶಾಖಾ ಹ್ಯನೇಕಾಃ ಸ್ಯುಸ್ತಾಸೂಪನಿಷದಸ್ತಥಾ।। I-೧೧**
**ವಿದೇಹಮುಕ್ತಾವಿಚ್ಛಾ ಚೇತ್ ಅಷ್ಟೋತ್ತರಶತಂ ಪಠ। I-೨೯**
**ಸರ್ವೋಪನಿಷದಾಂ ಮಧ್ಯೇ ಸಾರಮಷ್ಟೋತ್ತರಂ ಶತಮ್।। I-೪೪**
**ಏವಮಷ್ಟೋತ್ತರಶತಂ ಭಾವನಾತ್ರಯ ನಾಶನಮ್। I-೪೦**
**ಗೃಹೀತ್ವಾಷ್ಟೋತ್ತರಶತಂ ಯೇ ಪಠಂತಿ ದ್ವಿಜೋತ್ತಮಾಃ।**
**ಪ್ರಾರಬ್ಧಕ್ಷಯಪರ್ಯಂತಂ ಜೀವನ್ಮುಕ್ತಾ ಭವಂತಿ ತೇ। I-೪೨**

ಈ ೧೦೮ ಉಪನಿಷತ್ತುಗಳಲ್ಲಿ ಮೊದಲನೆಯ ೧೦ ಇವು:

**ಈಶಕೇನಕಠಪ್ರಶ್ನಮುಂಡಮಾಂಡೂಕ್ಯತಿತ್ತಿರಿಃ।**
**ಐತರೇಯಂ ಚ ಛಾಂದೋಗ್ಯಂ ಬೃಹದಾರಣ್ಯಕಂ ತಥಾ।। I-೩೦**
**ಮಾಂಡೂಕ್ಯಮೇಕಮೇವಾಲಂ ಮುಮುಕ್ಷೂಣಾಂ ವಿಮುಕ್ತಯೇ। I-೨೬**
**ತಥಾಪ್ಯಸಿದ್ಧಂ ಚೇಜ್ಜ್ಞಾನಂ ದಶೋಪನಿಷದಂ ಪಠ।। I-೨೭**

ದಶೋಪನಿಷತ್ತುಗಳು ಶುದ್ಧಬ್ರಹ್ಮಪರವಾದವು. ಶಂಕರ ರಾಮಾನುಜ ಪೂರ್ಣಪ್ರಜ್ಞರು ಪ್ರಮಾಣವೆಂದು ಅಂಗೀಕರಿಸುವುದು ಈ ಹತ್ತನ್ನು. ಮಿಕ್ಕ ಉಪನಿಷತ್ತುಗಳು ನಾನಾ ಪೌರಾಣಿಕ ದೇವತಾಪರಗಳಾದವು. ನೃಸಿಂಹ, ಗೋಪಾಲ, ಸ್ಕಂದ, ಶರಭ, ದಕ್ಷಿಣಾಮೂರ್ತಿ, ಹಯಗ್ರೀವ, ಸೂರ್ಯ, ಗಣಪತಿ, ಗಾಯತ್ರಿ, ಸರಸ್ವತಿ, ಲಕ್ಷ್ಮಿ ಮೊದಲಾದ ಅವತಾರಗಳಲ್ಲಿ ಪ್ರತ್ಯೇಕವಾಗಿ ಒಂದೊಂದರ ಪಾರಮ್ಯವನ್ನೂ ಭಸ್ಮ ರುದ್ರಾಕ್ಷ ಮೊದಲಾದ ಭಕ್ತಿಲಾಂಛನಗಳ ಮಹಿಮೆಯನ್ನೂ ಪ್ರತಿಪಾದಿಸುವ ಉಪನಿಷತ್ತುಗಳು ಇವು. ಈ ಎರಡನೆಯ ಜಾತಿಯ ಉಪನಿಷತ್ತುಗಳನ್ನು ದಶೋಪನಿಷತ್ತುಗಳ ಜಾತಿಗೆ ಸೇರಿದವೆಂದು ಭಾವಿಸಲಾಗದು. ಬೇರೆಬೇರೆ ಉಪಾಸಕರು ತಮ್ಮ ತಮ್ಮ ಭಕ್ತಿ ಶ್ರದ್ಧೆಗಳ ಆವೇಶದಲ್ಲಿ ಈ ಪ್ರಬಂಧಗಳನ್ನು ರಚಿಸಿ, ಅವುಗಳಿಗೆ ಒಂದು ಪ್ರಮಾಣಯೋಗ್ಯತೆಯನ್ನು ಸಂಪಾದಿಸಿ ಕೊಡುವುದಕ್ಕಾಗಿ ಅವುಗಳನ್ನು ಉಪನಿಷತ್ತೆಂದು ಕರೆದಿರಬೇಕು. ಮುಸಲ್ಮಾನರ 'ಅಲ್ಲಾ' ಭಗವಂತನ ಮಾಹಾತ್ಮ್ಯವನ್ನು ಪ್ರತಿಪಾದಿಸುವ 'ಅಲ್ಲಾಹೋಪನಿಷತ್' ಎಂಬ ಒಂದು ಕೃತಿ ಕೂಡ ಉಂಟೆಂದು ಸ್ವಾಮಿ ವಿವೇಕಾನಂದರು ಹೇಳಿದ್ದಾರೆ. ಈ ಪೌರಾಣಿಕಾದಿ ಅರ್ವಾಚೀನೋಪನಿಷತ್ತುಗಳ ರಚನೆಯಿಂದ ನಮಗೆ ತೋರಿಬರುವುದು ವೇದಾಂತಮತದ ಸರ್ವಜನಸಮನ್ವೇಯತ್ವ. ವೇದಾಂತದ ಮೂಲತತ್ತ್ವ ಎಲ್ಲರಿಗೂ ಪೂಜ್ಯವಾದದ್ದು. ಆ ತತ್ತ್ವವನ್ನು ಪ್ರತಿಯೊಬ್ಬರೂ ತಮ್ಮ ತಮ್ಮ ಅನ್ತಃಕರಣಗಳಿಗೆ

ಸುಗಮವಾಗುವ ರೀತಿಯಲ್ಲಿ ಉಪಾಸನೆ ಮಾಡಿಕೊಳ್ಳಬಹುದು ಎಂಬುದು ಆ ತತ್ತ್ವ.

'ಉಪನಿಷತ್' ಶಬ್ದದ ಅರ್ಥವಿಚಾರ ಈಗ ಪ್ರಸಕ್ತವಾಗಿದೆ. ಆ ಶಬ್ದಕ್ಕೆ ಒಂದು ಸರಳವಾದ ಅರ್ಥವೂ ಮೂರು ಕೊಂಚ ಕ್ಲಿಷ್ಟವಾದ ಅರ್ಥಗಳೂ ಇವೆ —

೧. 'ಉಪ + ನಿ + ಷದ್' — 'ಸಮೀಪದಲ್ಲಿ ನಿಷ್ಠೆಯಿಂದ ಕುಳಿತು ಕೇಳಬೇಕಾದ್ದು.' (ಷದ್ಌಗತೌ) ಎಂಬುದು ಸರಳವಾದ ಅರ್ಥ — 'ಪರಿಷತ್' 'ನಿಷದ್ಯಾ' ಎಂಬ ಮಾತುಗಳಲ್ಲಿರುವಂತೆ.

೨. 'ಉಪ + ನಿ + ಷದ್ — ಇಲ್ಲಿ 'ಷದ್' ಧಾತುವಿಗೆ ಮೂರು ಅರ್ಥಗಳು ('ಷದ್ಌ — ವಿಶರಣಗತ್ಯವಸಾದನೇಷು')

೧. ಒಡೆಯುವುದು, ೨. ಪಡೆಯುವುದು, ೩. ಕುಗ್ಗಿಸುವುದು.

೧. ಯಾವ ಉಪದೇಶವು ಅಜ್ಞಾನವನ್ನು ಸೀಳಿಹಾಕುವುದೋ (ಜ್ಞಾನವನ್ನು ಪ್ರಕಾಶಕ್ಕೆ ತರುವುದೋ) ಅದು ಉಪನಿಷತ್ತು.

೨. ಯಾವ ಉಪದೇಶವು ಬ್ರಹ್ಮಪ್ರಾಪ್ತಿಯನ್ನು ಉಂಟುಮಾಡುವುದೋ ಅದು ಉಪನಿಷತ್ತು.

೩. ಯಾವ ಉಪದೇಶವು ಜಗನ್ಮಾಯೆಯ ಹಿಡಿತವನ್ನು ಹೋಗಲಾಡಿಸುವುದೋ ಅದು ಉಪನಿಷತ್ತು.

ಇದರಲ್ಲಿ ಯಾವ ಅರ್ಥವನ್ನಿಟ್ಟುಕೊಂಡರೂ ಉಪನಿಷತ್ತಿನ ವಿಷಯ ಪರತತ್ತ್ವವೆಂಬುದೂ ಅದು ಗಹನವಿಷಯವಾದದ್ದರಿಂದ ಅದನ್ನು ಗುರುಸನ್ನಿಧಿಯಲ್ಲಿ ಕುಳಿತು ತದೇಕಧ್ಯಾನಿಯಾಗಿ ಕೇಳಬೇಕಾದದ್ದೆಂಬುದೂ ಸ್ಪಷ್ಟವಾಗಿದೆ. ಉಪನಿಷತ್ತೇ ವೇದಾಂತ; ಅದೇ ಬ್ರಹ್ಮವಿದ್ಯೆ.

ವೇದವು ಜಗದೀಶ್ವರನ ಸ್ವರೂಪವನ್ನೂ ಲೀಲಾವಿಭೂತಿಗಳನ್ನೂ ಆತನನ್ನು ಪೂಜಿಸಿ ಒಲಿಸಿಕೊಳ್ಳುವ ವಿಧಾನಗಳನ್ನೂ ತಿಳಿಸುತ್ತದೆ ಎಂದು ಹೇಳಿದ್ದೇವಷ್ಟೆ. ಈ ವೇದಗಳ ಸಾರಾಂಶವನ್ನು ಉಪನಿಷತ್ತುಗಳು ತಿಳಿಸುತ್ತವೆ. ಆದದ್ದರಿಂದಲೇ ಉಪನಿಷತ್ತುಗಳಿಗೆ ಒಟ್ಟಿನಲ್ಲಿ ವೇದಾಂತವೆಂದು ಹೆಸರು ಬಂದಿದೆ. ಪರಾತ್ಪರ ವಸ್ತುವನ್ನು ಕುರಿತ ಉಪದೇಶವೇ ಉಪನಿಷತ್ತು.

**ನವನೀತಂ ಯಥಾ ದಧ್ನೋ ಮಲಯಾಚ್ಚಂದನಂ ಯಥಾ।**
**ಆರಣ್ಯಕಂ ಚ ವೇದೇಭ್ಯ ಓಷಧಿಭ್ಯೋಽಮೃತಂ ಯಥಾ॥**

ಇದು ಶ್ರೀಮನ್ಮಹಾಭಾರತದ ವಾಕ್ಯ (ಶಾಂತಿ-ಮೋಕ್ಷಪರ್ವ, 344)

ಹೀಗೆ i. ನಿತ್ಯಾನಿತ್ಯವಿವೇಕ

ii. ಇಹ, ಪರ — ಎರಡರ ವಿಷಯದಲ್ಲಿಯೂ ಭೋಗವಿರಾಗ

iii. ಶಮದಮಾದಿ ಷಟ್ಕಸಂಪತ್ತಿ, ಮತ್ತು

iv. ಮುಮುಕ್ಷುತ್ವ

— ಈ ನಾಲ್ಕು ರೀತಿಯ ಶೀಲಸಂಸ್ಕಾರ ಯಾರಲ್ಲಿ ಉಂಟೋ ಅವರೇ ಉಪನಿಷದ್ ವ್ಯಾಸಂಗಕ್ಕೆ ಅಧಿಕಾರವನ್ನು ಪಡೆದವರಾಗುತ್ತಾರೆ.

* * * * *

# ಅನುಬಂಧ : ಉಪನಿಷತ್ತುಗಳ ಸಾರಾಂಶ

## ೧. ಈಶಾವಾಸ್ಯೋಪನಿಷತ್

ಇದು ಶುಕ್ಲಯಜುರ್ವೇದಕ್ಕೆ ಸೇರಿದ್ದು. ಈಶೋಪನಿಷತ್ತು ಎಂದೂ ಇದನ್ನು ಹೇಳುವುದುಂಟು. ಎಲ್ಲ ಉಪನಿಷತ್ತುಗಳೂ ಆತ್ಮನ ನಿಜಸ್ವರೂಪವನ್ನು ತಿಳಿಸುವುದಕ್ಕಾಗಿ ಹೊರಟಿರುವುದರಿಂದ ಈಶೋಪನಿಷತ್ತೂ ಆತ್ಮನಲ್ಲಿ ಕರ್ತೃತ್ವಭೋಕ್ತೃತ್ವಾದಿ ಧರ್ಮಗಳಿಲ್ಲವೆಂದು ಹೇಳಿ ಆತ್ಮನ ಶುದ್ಧಸ್ವರೂಪವನ್ನು ತಿಳಿಸಿಕೊಡುತ್ತದೆ. ಆದ್ದರಿಂದ ಈ ಉಪನಿಷತ್ತು ಕರ್ಮಕಾಂಡದ್ದಲ್ಲ. ವೈದಿಕಕರ್ಮದಲ್ಲಿ ಇದರ ಬಳಕೆಯಾಗಿಲ್ಲ.

ಈ ಜಗತ್ತಿನಲ್ಲಿರುವ ಪ್ರತಿಯೊಂದು ವಸ್ತುವೂ ಪರಮಾತ್ಮನೆಂಬ ಬುದ್ಧಿಯನ್ನು ತಳೆಯಬೇಕು. ಹೀಗೆ ನಮ್ಮದು ಎಂಬ ವಸ್ತುವಿಲ್ಲವಾದ ಕಾರಣ ಸರ್ವತ್ಯಾಗದಿಂದ ಆತ್ಮಸ್ವರೂಪದ ಪಾಲನೆಯಾಗುತ್ತದೆ. ಸರ್ವವೂ ಆತ್ಮವೇ ಆದ್ದರಿಂದ ಇದು ಹಣ, ಇದು ನನ್ನದು ಎಂಬ ರೀತಿಯ ಆಸೆಗೆ ಎಡೆಯಿಲ್ಲ. ಈ ಬಗೆಯ ತ್ಯಾಗಬುದ್ಧಿ ಯಾರಿಗೆ ಇಲ್ಲವೋ ಆತನು ಶಾಸ್ತ್ರವಿಹಿತ ಕರ್ಮವನ್ನು ಆಚರಿಸುತ್ತ ಇರಬೇಕು. ಫಲಾಪೇಕ್ಷೆ ಇಲ್ಲದೆ ಕರ್ಮವನ್ನು ಆಚರಿಸುತ್ತಿದ್ದರೆ ಕರ್ಮದಿಂದ ಬಾಧೆಯೊದಗದು. ಹೀಗೆ ಜ್ಞಾನನಿಷ್ಠೆ ಕರ್ಮನಿಷ್ಠೆ ಎಂಬ ಎರಡು ನಿಷ್ಠೆಗಳೂ ಇಲ್ಲಿ ಉಕ್ತವಾಗಿವೆ. ಮೂರನೆಯ ಮಂತ್ರದಲ್ಲಿ ಯಾರು ಆತ್ಮನನ್ನು ಹನನಮಾಡುತ್ತಾರೋ ಅವರು ಮತ್ತೆ ಹುಟ್ಟಿ ಸಂಸಾರದಲ್ಲಿ ನರಳುತ್ತಾರೆ ಎಂದು ಹೇಳಿದೆ. ಆತ್ಮನಾದ ತನ್ನ ನಿಃಸಂಗತ್ವಾದಿಗಳನ್ನು ಅರಿಯದೆ ಕರ್ತೃತ್ವಭೋಕ್ತೃತ್ವಾದಿಗಳನ್ನು ಯಾರು ಆರೋಪಿಸಿಕೊಳ್ಳುತ್ತಾರೋ ಅವರೇ ಆತ್ಮಹನನಕಾರಿಗಳು ಎಂದು ಶ್ರೀಶಂಕರಾಚಾರ್ಯರ ಆಶಯ.

ಬ್ರಹ್ಮತತ್ತ್ವವು ಕ್ರಿಯಾರಹಿತವಾಗಿದ್ದರೂ ಮನಸ್ಸು ಮುಂತಾದ ಉಪಾಧಿಗಳ ವಶದಿಂದ ಕ್ರಿಯಾಯುಕ್ತವಾಗಿರುವಂತೆ ತೋರುತ್ತದೆ. 'ಅದು ಹತ್ತಿರದಲ್ಲೂ ಇದೆ - ದೂರದಲ್ಲೂ ಇದೆ' — ಇತ್ಯಾದಿ ವಿರುದ್ಧವಚನಗಳಿಂದ ಆತ್ಮನ ಅದ್ಭುತ ಮಹಿಮೆಯನ್ನು ಇಲ್ಲಿ ವರ್ಣಿಸಿದ್ದಾರೆ. ಭಗವದ್ಗೀತೆಯ ಒಂಬತ್ತನೆಯ ಅಧ್ಯಾಯದಲ್ಲಿರುವ

**ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ।**
**ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಂ॥**

ಎಂಬ ಶ್ಲೋಕಕ್ಕೆ ಈಶೋಪನಿಷತ್ತಿನ ಆರನೆಯ ಮಂತ್ರವು ಆಧಾರವಾಗಿದೆ. ಅನ್ಯೋನ್ಯವಿರೋಧಾಭಾಸವಾದ ಹೇಳಿಕೆಗಳು ಈಶೋಪನಿಷತ್ತಿನ ವೈಶಿಷ್ಟ್ಯ. ಈ ವಿರೋಧವನ್ನು ಪರಿಹರಿಸಲು ಭಾಷ್ಯಕಾರರು ಬಹಳ ಶ್ರಮಿಸಬೇಕಾಗುತ್ತದೆ. ವಿದ್ಯಾ-ಅವಿದ್ಯಾ, ಸಂಭೂತಿ-ಅಸಂಭೂತಿ — ಇವುಗಳ ಅರ್ಥವನ್ನು ವ್ಯಾಖ್ಯಾನಕಾರರು

ವಿವಿಧ ರೀತಿಯಲ್ಲಿ ವ್ಯಾಖ್ಯಾನಿಸಿ ವಿರೋಧ ಪರಿಹಾರಕ್ಕೆ ಯತ್ನಿಸಿದ್ದಾರೆ. ಆತ್ಮವಿದ್ಯೆಯು ಶಾಸ್ತ್ರಪಾಂಡಿತ್ಯಕ್ಕೆ ವಶವಾಗತಕ್ಕದ್ದಲ್ಲ, ಗುರುಶಿಷ್ಯಪರಂಪರೆಯಿಂದಲೇ ಲಭಿಸತಕ್ಕದ್ದು — ಎಂಬುದಕ್ಕೆ ಈ ಉಪನಿಷತ್ತು ಒಂದು ಉದಾಹರಣೆಯಾಗಿದೆ. ಹದಿನೆಂಟು ಮಂತ್ರಗಳಿರುವ ಈ ಉಪನಿಷತ್ತು ಚಿಕ್ಕದಾದರೂ ಮಹತ್ತ್ವಪೂರ್ಣವಾದದ್ದು.

## ೨. ಕೇನೋಪನಿಷತ್

ಸಾಮವೇದದ ತಲವಕಾರಶಾಖೆಗೆ ಸೇರಿದ ಉಪನಿಷತ್ತು ಇದು. 'ಕೇನೇಷಿತಂ' ಎಂದು ಆರಂಭವಾಗುವುದರಿಂದ ಕೇನೋಪನಿಷತ್ತು ಎಂದು ಹೆಸರು ಬಂದಿದೆ. ಇದರಲ್ಲಿ ನಾಲ್ಕು ಖಂಡಗಳಿವೆ. ಇದು ಗುರುಶಿಷ್ಯರ ಪ್ರಶ್ನೋತ್ತರ ರೂಪದಲ್ಲಿದೆ. ಶಿಷ್ಯನ ಪ್ರಶ್ನೆ ಇದು —

ಯಾರ ಇಚ್ಛೆಗೆ ಒಳಗಾಗಿ ಮನಸ್ಸು ತನ್ನ ಕಾರ್ಯದಲ್ಲಿ ತೊಡಗುತ್ತದೆ? ಪ್ರಾಣವಾಯು ಯಾರ ಇಚ್ಛೆಯಂತೆ ಕೆಲಸಮಾಡುತ್ತದೆ? ಯಾರ ಇಚ್ಛೆಗೆ ಒಳಪಟ್ಟು ಜನರು ಮಾತಾಡಲು ತೊಡಗುತ್ತಾರೆ? ಹೀಗೆಯೇ ಕಣ್ಣು, ಕಿವಿ ಮುಂತಾದ ಇಂದ್ರಿಯಗಳನ್ನು ಪ್ರೇರಿಸತಕ್ಕವರು ಯಾರು?

ಉಪನಿಷತ್ತಿನ ಉಳಿದ ಭಾಗವೆಲ್ಲವೂ ಈ ಪ್ರಶ್ನೆಗಳಿಗೆ ಗುರುವು ಹೇಳಿದ ಉತ್ತರವಾಗಿದೆ. ಈ ಎಲ್ಲ ಕ್ರಿಯೆಗಳಿಗೂ ಮೂಲಕಾರಣವಾದದ್ದು ಬ್ರಹ್ಮ. ಮಹಿಮಾನ್ವಿತವಾದ ಈ ಬ್ರಹ್ಮದ ವರ್ಣನೆ ಗಂಭೀರವಾದದ್ದು. ಮನೋವಾಕ್ಕುಗಳಿಗೆ ಅಗೋಚರವಾದ ವಸ್ತುವನ್ನು ವರ್ಣಿಸುವುದು ಹೇಗೆ? ಯಾವುದೋ ಒಂದು ಅವರ್ಣನೀಯವಾದ ವಸ್ತುವು ಮನಸ್ಸು, ಇಂದ್ರಿಯಗಳನ್ನು ಪ್ರೇರಿಸುತ್ತದೆ. ಅದೇ ಬ್ರಹ್ಮವೆಂದು ತಿಳಿ — ಎಂದು ಆಚಾರ್ಯನ ಉತ್ತರ. ಮುಂದೆ ಆತನು ಹೇಳುವುದೆಲ್ಲವೂ ಸಮಸ್ಯೆಯಾಗಿಬಿಡುತ್ತದೆ. 'ಯಾವಾತನು ಬ್ರಹ್ಮವನ್ನು ತಿಳಿದಿದ್ದೇನೆಂದು ಹೇಳುತ್ತಾನೋ ಅವನಿಗೆ ಏನೂ ತಿಳಿದಿರುವುದಿಲ್ಲ. ಯಾವಾತನು ನನಗೆ ತಿಳಿಯದು ಎನ್ನುತ್ತಾನೋ ಆತನು ತಿಳಿದಿರುತ್ತಾನೆ! 'ಅನ್ಯದೇವ ತದ್ ವಿದಿತಾತ್, ಅಥೋ ಅವಿದಿತಾದಧಿ.' ಬ್ರಹ್ಮವು ವಿದಿತವಾದದ್ದು ಸರ್ವಥಾ ಅಲ್ಲ, ಅವಿದಿತವಾದದ್ದೂ ಅಲ್ಲ! ವಿದಿತವಾದದ್ದು ತನಗಿಂತ ಅನ್ಯವಸ್ತುವಾಗಿರಬೇಕು. ಅವಿದಿತವಾದದ್ದೂ ಇನ್ನೊಂದಾಗಿರಬೇಕು. ಇವೆರಡೂ ಅಲ್ಲವೆಂದರೆ ತಾನೇ ಆಗುತ್ತಾನೆ. ಆದ್ದರಿಂದ ಸ್ವಸ್ವರೂಪವೇ ಆತ್ಮನಾಗಿದ್ದಾನೆ — ಎಂದು ಅಭಿಪ್ರಾಯ. ಇದನ್ನು ಕೇನೋಪನಿಷತ್ತು ನಾನಾಮಾರ್ಗಗಳಿಂದ ತಿಳಿಸಿಕೊಡುತ್ತದೆ. ಈ ನಿರ್ಗುಣಬ್ರಹ್ಮವು ಉಪಾಸನೆಗೆ

ಶಕ್ಯವಾದದ್ದಲ್ಲ. ಇದನ್ನು ಮೊದಲನೆಯ ಎರಡು ಖಂಡಗಳಲ್ಲಿ ಉಪಪಾದಿಸಿ, ಮೂರನೆಯ ಖಂಡದಲ್ಲಿ ಸಗುಣಬ್ರಹ್ಮವಾದ ಈಶ್ವರನ ಉಪಾಸನೆ ಆವಶ್ಯಕವೆಂದೂ ಮುಮುಕ್ಷುವಿಗೆ ಈಶ್ವರೋಪಾಸನೆ ಮೋಕ್ಷಕ್ಕೆ ದಾರಿಯೆಂದೂ ಪ್ರತಿಪಾದಿಸಲಾಗಿದೆ.

ಈಶ್ವರನೆಂದರೆ ಮಾಯೆಯೆಂಬ ಉಪಾಧಿಯುಳ್ಳ ಪರಬ್ರಹ್ಮ.

ಒಮ್ಮೆ ದೇವಾಸುರರಿಗೆ ಯುದ್ಧವು ನಡೆದಾಗ ಈಶ್ವರನ ಇಚ್ಛೆಯಂತೆ ದೇವತೆಗಳು ಅಸುರರನ್ನು ಸೋಲಿಸಿದರು. ಆಗ ದೇವತೆಗಳಿಗೆ ವಿಜಯವಾದ್ದರಿಂದ ಎಲ್ಲರೂ ಅವರನ್ನು ಪೂಜಿಸಿದರು. ದೇವತೆಗಳು ತಮ್ಮ ಶಕ್ತಿಮಹಿಮೆಯಿಂದಲೇ ತಮಗೆ ಜಯವಾಯಿತೆಂದು ಅಹಂಕಾರದಿಂದ ಮೆರೆಯುತ್ತಿದ್ದರು. ಅವರಿಗೆ ಬುದ್ಧಿಯನ್ನು ಕಲಿಸಬೇಕೆಂದು ಈಶ್ವರನು ಅವರೆದುರಿಗೆ ದೂರದಲ್ಲಿ ಅದ್ಭುತಾಕಾರದ ಯಕ್ಷನಾಗಿ ಕಾಣಿಸಿಕೊಂಡನು. ಅದೇನೆಂದು ತಿಳಿದುಬರುವುದಕ್ಕಾಗಿ ದೇವತೆಗಳು ಅಗ್ನಿಯನ್ನು ಕಳಿಸಿದರು. ಅಗ್ನಿಯು ಯಕ್ಷನ ಎದುರಿಗೆ ಹೋಗಿ ನಿಂತಾಗ ಯಕ್ಷನು "ನೀನು ಯಾರು? ನಿನ್ನ ಪರಾಕ್ರಮವೇನು?" ಎಂದು ಕೇಳಿದನು. ಅಗ್ನಿಯು "ನಾನು ಜಾತವೇದ. ಯಾವುದನ್ನಾದರೂ ಸುಟ್ಟು ಬೂದಿಮಾಡಬಲ್ಲೆ" ಎಂದನಂತೆ. ಯಕ್ಷನು ಒಂದು ಹುಲ್ಲುಕಡ್ಡಿಯನ್ನು ಮುಂದಿಟ್ಟು "ಇದನ್ನು ಸುಡು, ನೋಡೋಣ!" ಎನ್ನುತ್ತಾನೆ. ಏನು ಮಾಡಿದರೂ ಅಗ್ನಿಗೆ ಅದನ್ನು ಸುಡಲಾಗಲಿಲ್ಲ. ಅವನು ಪೆಚ್ಚಾಗಿ ಹಿಂದಿರುಗಿದ. ಆಮೇಲೆ ವಾಯು ಹೋಗಿ ಸೋತು ಹಿಂದಿರುಗಿದ. ಆಮೇಲೆ ದೇವೇಂದ್ರನೇ ಸ್ವತಃ ಹೋಗುತ್ತಾನೆ. ಆಗ ಯಕ್ಷನು ಮಾಯವಾಗಿ ಆ ಸ್ಥಳದಲ್ಲಿ ಬ್ರಹ್ಮವಿದ್ಯಾರೂಪಳಾದ ಉಮಾದೇವಿಯು ಕಾಣಿಸಿಕೊಳ್ಳುತ್ತಾಳೆ. ಅನಂತರ ಈಶ್ವರನ ಶಕ್ತಿಯಿಂದಲೇ ತಮಗೆ ಜಯವಾಯಿತೆಂದು ತಿಳಿದಾಗ ದೇವತೆಗಳ ಅಹಂಕಾರ ಅಡಗುತ್ತದೆ. ಜನರ ಜ್ಞಾನಶಕ್ತಿ, ಕ್ರಿಯಾಶಕ್ತಿ ಮುಂತಾದ್ದೆಲ್ಲವೂ ಭಗವಂತನಿಂದ ಪ್ರಾಪ್ತವಾಗಿದೆಯೆಂದು ತಿಳಿಸುವುದು ಈ ಉಪಾಖ್ಯಾನದ ಉದ್ದೇಶವಾಗಿದೆ. ಉಪನಿಷತ್ ಎಂದರೆ ಬ್ರಹ್ಮವಿದ್ಯೆ.

ಆತ್ಮಜ್ಞಾನವನ್ನು ಪಡೆಯಲು ತಪಸ್ಸು, ದಮ, ಕರ್ಮ — ಇವು ಸಾಧನಗಳು. ವೇದ, ವೇದಾಂಗಗಳ ಅರ್ಥಜ್ಞಾನವೂ ಸಹ ಉತ್ತಮವಾದ ಸಾಧನವಾಗಿದೆ. ಇವುಗಳಿಂದ ಬ್ರಹ್ಮವಿದ್ಯೆಯು ಪ್ರತಿಷ್ಠಿತವಾಗಿ ನಿಲ್ಲುತ್ತದೆ.

**೩. ಕಠೋಪನಿಷತ್**

ಇದು ಕೃಷ್ಣಯಜುರ್ವೇದದ ಕಾಠಕಶಾಖೆಗೆ ಸೇರಿದ ಉಪನಿಷತ್ತು. ಇದರಲ್ಲಿ ಎರಡು ಅಧ್ಯಾಯಗಳಿದ್ದು, ಒಂದೊಂದರಲ್ಲಿಯೂ ಮೂರು ವಲ್ಲಿಗಳಿವೆ.

ಮೊದಲನೆಯ ವಲ್ಲಿಯಲ್ಲಿ ನಚಿಕೇತಸ್ಸಿನ ಕಥೆ ಬಂದಿದೆ. ತಂದೆಯಾದ ವಾಜಶ್ರವಸ್ಸಿನ ಕೋಪಕ್ಕೆ ಗುರಿಯಾಗಿ ನಚಿಕೇತನು ಯಮಲೋಕಕ್ಕೆ ಹೋಗಬೇಕಾಗಿಬರುತ್ತದೆ. ಅಲ್ಲಿ ಯಮಧರ್ಮರಾಜನು ನಚಿಕೇತನಿಗೆ ಮೂರು ವರಗಳನ್ನು ಕೊಡುತ್ತಾನೆ. ಆತ್ಮಸ್ವರೂಪವನ್ನು ತಿಳಿಸಬೇಕೆಂಬುದು ನಚಿಕೇತನು ಕೇಳಿಕೊಂಡ ಮೂರನೆಯ ವರ. ಅದಕ್ಕೆ ಬದಲಾಗಿ ನಾನಾ ಬಗೆಯ ಭೋಗಗಳನ್ನು, ದೀರ್ಘಾಯುಸ್ಸನ್ನು ಕೇಳಿಕೊಳ್ಳು ವಂತೆ ಯಮಧರ್ಮನು ಒತ್ತಾಯಪಡಿಸಿದರೂ ನಚಿಕೇತನು ಜಗ್ಗುವುದಿಲ್ಲ. ವಿಷಯ ಭೋಗಗಳೆಲ್ಲವನ್ನು ತಳ್ಳಿಹಾಕಿ, ಆತ್ಮವಿದ್ಯೆಯನ್ನೇ ಬೋಧಿಸಬೇಕೆಂದು ಹಟಹಿಡಿಯು ತ್ತಾನೆ. ಆಗ ಯಮದೇವನು ಉಪದೇಶಿಸಿದ ಆತ್ಮವಿದ್ಯೆಯನ್ನು ಎರಡನೆಯ ವಲ್ಲಿಯಲ್ಲಿ ವಿವರಿಸಲಾಗಿದೆ. ಇಲ್ಲಿ ಯಮದೇವನು ಬ್ರಹ್ಮವಿದ್ಯಾಚಾರ್ಯನಾಗಿದ್ದಾನೆ.

**‘ಓಂ ನಮೋ ಭಗವತೇ ವೈವಸ್ವತಾಯ ಮೃತ್ಯವೇ ಬ್ರಹ್ಮವಿದ್ಯಾಚಾರ್ಯಾಯ ನಚಿಕೇತಸೇ ಚ’** ಎಂದು ಉಪನಿಷತ್ತಿನ ಮೊದಲನೆಯ ವಚನ. ಇಲ್ಲಿ ಗಮನಾರ್ಹ ವಾದವು ಮೂರು ಅಂಶಗಳು.

೧. ಚಿಕ್ಕವಯಸ್ಸಿನ ನಚಿಕೇತನಿಗೆ ಲೋಕದ ಸಮಸ್ತಭೋಗಭಾಗ್ಯಗಳೂ ಬೇಡ ವೆಂಬ ವಿಸ್ಮಯಕರವಾದ ವೈರಾಗ್ಯ ಮತ್ತು ಆತ್ಮವಿದ್ಯೆಯಲ್ಲಿ ಆತನಿಗಿದ್ದ ಅಚಲವಾದ ನಿಷ್ಠೆ.

೨. ಸಕಲಸಂಪತ್ತುಗಳಿಗಿಂತಲೂ ಸ್ವರ್ಗಸುಖಕ್ಕಿಂತಲೂ ಬ್ರಹ್ಮವಿದ್ಯೆಯು ಸರ್ವೋತ್ತಮವೂ ಶಾಶ್ವತವೂ ಆದದ್ದೆಂಬ ನಿಶ್ಚಲವಾದ ನಿಲುವು.

೩. ಬ್ರಹ್ಮವಿದ್ಯೆಯನ್ನು ಕಂಡಕಂಡವರಿಗೆ ಉಪದೇಶಿಸಕೂಡದು. ಶಿಷ್ಯನನ್ನು ಪರೀಕ್ಷಿಸಿ ಅದಕ್ಕೆ ಅರ್ಹನಾದ ಅಧಿಕಾರಿಯೆಂದು ನಿರ್ಣೀತವಾದಮೇಲೆಯೇ ಆತನಿಗೆ ಬ್ರಹ್ಮವಿದ್ಯೆಯನ್ನು ಉಪದೇಶಿಸಬೇಕು.

ಹೀಗೆ ಪ್ರಥಮವಲ್ಲಿಯಲ್ಲಿ ಯಮಧರ್ಮರಾಜನು ನಚಿಕೇತನಿಗೆ ಆತ್ಮವಿದ್ಯೆಯನ್ನು ಉಪದೇಶಿಸಬೇಕಾದ ಪ್ರಸಂಗವನ್ನು ನಿರೂಪಿಸಿದೆ. ಅನಂತರ ಉಳಿದ ಐದು ವಲ್ಲಿಗಳಲ್ಲಿ ಉಪದೇಶದ ಪ್ರಕಾರವು ಬಹುಸುಂದರವಾಗಿ ಬಂದಿದೆ. ಗಮನಾರ್ಹ ವಾದ ಕೆಲವು ಮಾತುಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ.

೧. ಅವಿದ್ಯೆಯಲ್ಲಿ ಮುಳುಗಿಹೋದ ಜನರು ‘ಈ ಸಂಸಾರವೇ ಸತ್ಯ, ಪರಲೋಕವೆಂಬುದಿಲ್ಲ’ ಎಂದು ಭಾವಿಸಿಕೊಂಡಿದ್ದಾರೆ. ಕುರುಡನು ದಾರಿತೋರಿಸಿ ದಂತೆ ಅವರ ಸ್ಥಿತಿಯಾಗಿದೆ. ಕತ್ತಲೆಯಲ್ಲಿ ತಡವರಿಸುತ್ತಲೇ ಇರುತ್ತಾರೆ. ಅಂತಹ

ಮೂಢರು ಮತ್ತೆ ಮತ್ತೆ ಹುಟ್ಟಿ ನನ್ನ (ಯಮನ) ವಶಕ್ಕೆ ಬರುತ್ತಲೇ ಇದ್ದಾರೆ. **'ಪುನಃ ಪುನರ್ವಶಮಾಪದ್ಯತೇ ಮೇ'.** (೧-೨-೬)

**೨. ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಸ್ತಸ್ಮಾತ್ ಪರಾಙ್ ಪಶ್ಯತಿ ನಾಂತರಾತ್ಮನ್॥** (೨-೪-೧)

ಬ್ರಹ್ಮನು ಜನರ ಇಂದ್ರಿಯಗಳನ್ನು ಹೊರಮುಖವಾಗಿ ಸೃಷ್ಟಿಸಿಬಿಟ್ಟಿದ್ದಾನೆ! ಆದ್ದರಿಂದ ಜನರು ಹೊರಗೆ ಏನಿದೆ — ಎಂಬುದನ್ನು ನೋಡುತ್ತಾರೆಯೇ ಹೊರತು, ತಮ್ಮೊಳಗೆ ಇರತಕ್ಕವನು ಯಾರು? ತಮ್ಮ ಸ್ವರೂಪ ಯಾವುದು — ಎಂಬುದನ್ನು ಚಿಂತಿಸುವುದೇ ಇಲ್ಲ!

**೩. ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ।**

**ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್॥** (೧-೨-೨೨)

ಆತ್ಮನನ್ನರಿಯುವುದು ಸುಲಭವಲ್ಲ; ಅನೇಕ ವೇದಗಳನ್ನು ಕಲಿತರೆ ದೊರೆಯುವುದಿಲ್ಲ; ಗ್ರಂಥಾಭ್ಯಾಸದಿಂದ ಬಂದ ಮೇಧಾಶಕ್ತಿಗೂ ಲಭ್ಯನಲ್ಲ. ನಾನಾಶಾಸ್ತ್ರಗಳನ್ನು ಕಲಿತರೂ ಆತ್ಮಸ್ವರೂಪವು ತಿಳಿಯುವುದಿಲ್ಲ, ಒಲಿಯುವುದಿಲ್ಲ. ಯಾವಾತನು ಈಶ್ವರನ ಮತ್ತು ಗುರುವಿನ ಅನುಗ್ರಹದಿಂದ 'ಸೋಽಹಂ' ಎಂದು ತನ್ನ ಸ್ವರೂಪವನ್ನೇ ಅನುಸಂಧಾನ ಮಾಡುತ್ತಾನೋ ಆತನಿಗೆ ಮಾತ್ರ ಆತ್ಮನು ಲಭ್ಯನಾಗುತ್ತಾನೆ.

ಭಕ್ತಿ, ಶ್ರದ್ಧೆ ಮುಂತಾದ ಸಾಧನಸಂಪತ್ತು ಯಾರಿಗಿಲ್ಲವೋ ಆತನಿಗೆ ಆತ್ಮಜ್ಞಾನ ಲಭಿಸುವುದಿಲ್ಲ. ಸರ್ವಧರ್ಮಗಳನ್ನು ರಕ್ಷಿಸಲು ಸಮರ್ಥವಾದ ಬ್ರಾಹ್ಮಣ್ಯವಾಗಲಿ, ಕ್ಷತ್ರಿಯಧರ್ಮವಾಗಲಿ, ಯಾವ ಆತ್ಮನಿಗೆ ಅನ್ನವಾಗಿಬಿಡುವುದೋ, ಮೃತ್ಯುವೂ ಸಹ ಅನ್ನದ ಜೊತೆಗೆ ನಂಜಿಕೊಳ್ಳುವ ಉಪ್ಪಿನಕಾಯಿಯಾಗಿಬಿಡುವುದೋ ಅಂತಹ ಮಹಿಮೆಯುಳ್ಳ ಆತ್ಮನನ್ನು ಸಾಧನಸಂಪತ್ತಿಲ್ಲದೆ, ಬ್ರಹ್ಮಚರ್ಯವಿಲ್ಲದೆ, ಗುರೂಪದೇಶವಿಲ್ಲದೆ ಯಾವನು ತಿಳಿಯಬಲ್ಲನು? ಆತ್ಮನ ಸ್ವರೂಪವನ್ನರಿತವನಿಗೆ ಯಾವ ಶೋಕವೂ ಇರುವುದಿಲ್ಲ. ಯಾವನು ಸಮಾಹಿತಚಿತ್ತನೋ, ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಂಡಿರುವನೋ ಆತನು ದೂರದ ದಾರಿಯನ್ನು ದಾಟಿ ಗುರಿಯನ್ನು ತಲುಪಬಲ್ಲನು.

**ಉತ್ತಿಷ್ಠತ ಜಾಗ್ರತ ಪ್ರಾಪ್ಯ ವರಾನ್ ನಿಬೋಧತ।**
**ಕ್ಷುರಸ್ಯ ಧಾರಾ ನಿಶಿತಾ ದುರತ್ಯಯಾ ದುರ್ಗಂ ಪಥಸ್ತತ್ ಕವಯೋ ವದಂತಿ॥**
(೧-೩-೧೪)

"ಎಲೈ ಜನರೆ, ಆತ್ಮಜ್ಞಾನಕ್ಕೆ ಅಭಿಮುಖರಾಗಿರಿ, ಅಜ್ಞಾನವೆಂಬ ನಿದ್ರೆಯಿಂದ ಎಚ್ಚರಗೊಳ್ಳಿರಿ. ಈ ಅಜ್ಞಾನನಿದ್ರೆಯು ಘೋರವಾದದ್ದು, ಸರ್ವ ಅನರ್ಥಗಳಿಗೂ ಕಾರಣವಾದದ್ದು. ಇದನ್ನು ತೊಡೆದುಹಾಕಿ ಮೇಲೇಳಿರಿ. ಉತ್ತಮರಾದ ಆಚಾರ್ಯರನ್ನು ಸೇವಿಸಿ, ಅವರು ಅನುಗ್ರಹಿಸುವ ಉಪದೇಶಗಳನ್ನು ಆಲಿಸಿರಿ. ನೀವು ಹೋಗಬೇಕಾದ ದಾರಿ ಕತ್ತಿಯ ಅಲಗಿನಂತೆ ಅತ್ಯಂತ ಹರಿತವಾಗಿದೆ. ತತ್ತ್ವಜ್ಞಾನವೆಂಬ ಈ ದಾರಿಯು ದುರ್ಗಮವಾದ್ದೆಂದು ವಿದ್ವಾಂಸರೇ ಹೇಳುತ್ತಾರೆ. ಗುರೂಪದೇಶದಂತೆ ಎಚ್ಚರಿಕೆಯಿಂದ ಮುಂದೆ ಸಾಗಿರಿ."

ತಾಯಿಯು ಮಕ್ಕಳಿಗೆ ಹೇಳುವಂತೆ ಶ್ರುತಿಯು ಈ ಪ್ರಕಾರವಾಗಿ ಉಪದೇಶಿಸುತ್ತದೆಯೆಂದು ಶ್ರೀಶಂಕರಾಚಾರ್ಯರು ಹೇಳುತ್ತಾರೆ.

## ೪. ಪ್ರಶ್ನೋಪನಿಷತ್

ಅಥರ್ವವೇದಕ್ಕೆ ಸೇರಿದ ಈ ಉಪನಿಷತ್ತಿನಲ್ಲಿ ಆರು ಪ್ರಶ್ನೆಗಳಿವೆ. ಆರು ಮಂದಿ ಬ್ರಹ್ಮನಿಷ್ಠರು ಕೇಳಿದ ಪ್ರಶ್ನೆಗಳಿಗೆ ಭಗವಾನ್ ಪಿಪ್ಪಲಾದಮಹರ್ಷಿಯು ಉತ್ತರಗಳನ್ನು ಹೇಳುತ್ತಾನೆ. "ನೀವು ಇಂದ್ರಿಯಗಳನ್ನು ಸಂಯಮಿಸಿ ಗುರುಶುಶ್ರೂಷೆ ಮಾಡುತ್ತ ಒಂದು ವರ್ಷದವರೆಗೆ ಗುರುಕುಲವಾಸವನ್ನು ಮಾಡಿರಿ. ಅನಂತರ ಆಸ್ತಿಕ್ಯಬುದ್ಧಿಯಿಂದ ಪ್ರಶ್ನೆಯನ್ನು ಕೇಳಿರಿ. ನನಗೆ ಸಾಧ್ಯವಾದರೆ ಉತ್ತರವನ್ನು ಹೇಳುತ್ತೇನೆ" ಎಂದು ಪಿಪ್ಪಲಾದನು ಹೇಳುತ್ತಾನೆ. ಅಂತೆಯೇ ಒಂದು ವರ್ಷ ಕಳೆದಮೇಲೆ ಶಿಷ್ಯರು ಪ್ರಶ್ನೆಗಳನ್ನು ಕೇಳುತ್ತಾರೆ. ಅವುಗಳಿಗೆ ಪಿಪ್ಪಲಾದಮಹರ್ಷಿಯು ಹೇಳಿದ ಉತ್ತರಗಳು ಕ್ಲಿಷ್ಟವಾದವು. ಅವುಗಳಿಗೆ ದೀರ್ಘವಾದ ವಿವರಣೆ ಬೇಕಾಗುತ್ತದೆ. ಅಲ್ಲಲ್ಲಿ ಪ್ರಾಚೀನ ಮಂತ್ರಗಳನ್ನು ಉದಾಹರಿಸಲಾಗಿದೆ.

### ಅ. ಕಾತ್ಯಾಯನ ಕಬಂಧಿಯ ಪ್ರಶ್ನೆ

ಭಗವನ್, ಈ ಪ್ರಜೆಗಳು ಎಲ್ಲಿಂದ ಹೇಗೆ ಹುಟ್ಟಿದರು?

ಉತ್ತರ : ಪ್ರಜಾಪತಿಯು ಪ್ರಜೆಗಳನ್ನು ಸೃಷ್ಟಿಸಬೇಕೆಂಬ ಉದ್ದೇಶದಿಂದ ರಯಿ ಮತ್ತು ಪ್ರಾಣಗಳನ್ನು ಮೊದಲು ಸೃಜಿಸಿದನು. ಪ್ರಾಣವೆಂದರೆ ಸೂರ್ಯ, ರಯಿಯೆಂದರೆ ಚಂದ್ರ. ಸೂರ್ಯನು ಭೋಕ್ತೃ, ಚಂದ್ರನು ಭೋಗ್ಯ; — ಇತ್ಯಾದಿ.

ದಂಪತಿಗಳಿಂದ ಪ್ರಜಾಸೃಷ್ಟಿಯಾಗುತ್ತದೆ. ಈ ಸೃಷ್ಟಿ ಕರ್ಮಕಾಂಡವಾದ್ದರಿಂದ ಸಂಸಾರಬಂಧನಕ್ಕೆ ನಿಮಿತ್ತವಾಗಿದೆ ಎಂದು ತಾತ್ಪರ್ಯ.

## ಆ. ವೈದರ್ಭಿ ಭಾರ್ಗವನ ಪ್ರಶ್ನೆ

ಭಗವನ್, ಪ್ರಜೆಯೆಂಬ ಈ ಶರೀರವನ್ನು ಧರಿಸಿರುವ ದೇವತೆಗಳು ಎಷ್ಟು? ಎಷ್ಟು ದೇವತೆಗಳು ಈ ಶರೀರವನ್ನು ಬೆಳಗುತ್ತಾರೆ? ಅವರಲ್ಲಿ ಮುಖ್ಯನು ಯಾರು?

ಉತ್ತರ : ಆಕಾಶನೆಂಬ ಚೈತನ್ಯಸ್ವರೂಪನಾದ ದೇವನು ಈ ಶರೀರವನ್ನು ಧರಿಸಿದ್ದಾನೆ. ಜ್ಞಾನೇಂದ್ರಿಯಗಳೂ ಕರ್ಮೇಂದ್ರಿಯಗಳೂ ಇದನ್ನು ಬೆಳಗುತ್ತವೆ. ಅವರಲ್ಲಿ ಮುಖ್ಯನಾದವನು ಪ್ರಾಣ.

ಇಲ್ಲಿ ಪ್ರಾಣವೆಂದರೆ ಚಿದ್ರೂಪನಾದ ಜೀವಾತ್ಮನೆಂದು ತಾತ್ಪರ್ಯ.

## ಇ. ಕೌಸಲ್ಯ ಅಶ್ವಲಾಯನನ ಪ್ರಶ್ನೆ

ಭಗವನ್, ಈ ಪ್ರಾಣನು ಯಾರಿಂದ ಹುಟ್ಟುತ್ತಾನೆ? ಈ ಶರೀರದೊಳಗೆ ಅವನು ಏಕೆ ಬಂದು ಸೇರಿಕೊಳ್ಳುತ್ತಾನೆ? ಯಾವ ರೀತಿಯಲ್ಲಿ ತನ್ನನ್ನು ವಿಭಾಗಿಸಿಕೊಂಡು ಇಲ್ಲಿರುತ್ತಾನೆ? ಅವನು ಈ ದೇಹದಿಂದ ನಿರ್ಗಮಿಸುವುದು ಹೇಗೆ?

ಉತ್ತರ : ನೀನು ಕೇಳಬಾರದ ಪ್ರಶ್ನೆಯನ್ನು ಕೇಳುತ್ತಿದ್ದೀಯೆ, ಆಗಲಿ. ಈ ಪ್ರಾಣನು ಪರಮಾತ್ಮನಿಂದ ಹುಟ್ಟುತ್ತಾನೆ — ಮನುಷ್ಯನಿಂದ ನೆರಳು ಹುಟ್ಟುವಂತೆ! ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ ಎಂದು ತನ್ನನ್ನೇ ವಿಭಾಗಿಸಿಕೊಂಡಿದ್ದಾನೆ. ಇವುಗಳಿಂದ ಕರ್ಮಕ್ಕೆ ಅನುಗುಣವಾಗಿ ಹೋಗುತ್ತಾನೆ, ಬರುತ್ತಾನೆ.

ಅನಂತರ ಗಾರ್ಗ್ಯ, ಶೈಬ್ಯ, ಭಾರದ್ವಾಜ ಎಂಬ ಮೂವರು ಬೇರೆಬೇರೆ ಪ್ರಶ್ನೆಗಳನ್ನು ಹಾಕಿ ಪಿಪ್ಪಲಾದನಿಂದ ಉತ್ತರಗಳನ್ನು ಪಡೆಯುತ್ತಾರೆ. ಪಿಪ್ಪಲಾದನು ತನ್ನ ಉತ್ತರಗಳಿಗೆ ವಿವರಣೆಯನ್ನು ಕೊಡುತ್ತಾನೆ. ವಿವರಣೆಯೂ ಸಹ ಕಬ್ಬಿಣದ ಕಡಲೆಯಾಗಿದೆ. ಅದನ್ನು ಭೇದಿಸಲು ಭಾಷ್ಯವೂ ಅದಕ್ಕೆ ವ್ಯಾಖ್ಯಾನವೂ ಬೇಕಾಗುತ್ತದೆ. ದುರವಗಾಹವಾದ ಪ್ರಶ್ನೋತ್ತರಗಳು ಈ ಉಪನಿಷತ್ತಿನಲ್ಲಿವೆ. ಆದ್ದರಿಂದ ಶಂಕರಾನಂದರೆಂಬ ಯತಿಗಳು ದೀಪಿಕಾ ಎಂಬ ಒಂದು ವ್ಯಾಖ್ಯಾನವನ್ನು ಈ ಉಪನಿಷತ್ತಿಗೆ ಬರೆಯಬೇಕಾಯಿತು.

## ೫. ಮುಂಡಕೋಪನಿಷತ್ತು

ಇದು ಅಥರ್ವವೇದಕ್ಕೆ ಸೇರಿದೆ. ಇದರಲ್ಲಿ ಮುಂಡಕ ಎಂಬ ಹೆಸರಿನ ಮೂರು

ವಿಭಾಗಗಳಿದ್ದು, ಒಂದೊಂದು ವಿಭಾಗದಲ್ಲಿ ಎರಡು ಖಂಡಗಳಂತೆ ಒಟ್ಟು ಆರು ಖಂಡಗಳಿವೆ. "ವಿಶ್ವದ ಕರ್ತನೂ ಪಾಲಕನೂ ಆದ ಬ್ರಹ್ಮನು ದೇವತೆಗಳಲ್ಲಿ ಪ್ರಥಮನು. ಅವನು ಸರ್ವವಿದ್ಯೆಗಳಲ್ಲಿಯೂ ಶ್ರೇಷ್ಠವಾದ ಬ್ರಹ್ಮವಿದ್ಯೆಯನ್ನು ತನ್ನ ಜ್ಯೇಷ್ಠಪುತ್ರನಾದ ಅಥರ್ವನಿಗೆ ಉಪದೇಶಿಸಿದನು" ಎಂದು ಈ ಉಪನಿಷತ್ತಿನ ಆರಂಭದಲ್ಲಿ ಹೇಳಿದೆ.

ಒಂದನೆಯ ಮುಂಡಕದಲ್ಲಿ ಪರಾವಿದ್ಯೆ, ಅಪರಾವಿದ್ಯೆಗಳ ವಿಷಯ ಬಂದಿದೆ. ನಾಲ್ಕು ವೇದಗಳೂ, ಆರು ವೇದಾಂಗಗಳೂ ಅಪರಾವಿದ್ಯೆಗೇ ಸೇರುತ್ತವೆ. ಯಾವುದರಿಂದ ಅಕ್ಷರವಾದ ಬ್ರಹ್ಮದ ಪ್ರಾಪ್ತಿಯಾಗುವುದೋ ಅಂತಹ ಅಧ್ಯಾತ್ಮ ವಿದ್ಯೆಯು ಪರಾವಿದ್ಯೆ. ಅದೇ ಉಪನಿಷತ್ತು. ಜೇಡರಹುಳುವಿನಿಂದ ಜೇಡರಬಲೆ ಹುಟ್ಟುವಂತೆ ಅಕ್ಷರವಾದ ಬ್ರಹ್ಮದಿಂದ ಈ ಜಗತ್ತು ಹುಟ್ಟುತ್ತದೆ ಮತ್ತು ಅದರಲ್ಲಿಯೇ ಲಯವಾಗುತ್ತದೆ.

ಯಜ್ಞಯಾಗಾದಿಗಳೇ ಶ್ರೇಷ್ಠವೆಂದು ತಿಳಿದ ಕರ್ಮಠರು ಸ್ವರ್ಗವನ್ನು ಅನುಭವಿಸಿ, ಪುನಃ ಈ ಲೋಕಕ್ಕೆ ಮರಳುತ್ತಾರೆ. ಆದ್ದರಿಂದ ಮುಮುಕ್ಷುವಾದವನು ಕರ್ಮಫಲ ವನ್ನು ಗಣಿಸದೆ, ಬ್ರಹ್ಮವಿದ್ಯೆಗಾಗಿ ಶ್ರೋತ್ರಿಯನಾದ ತತ್ತ್ವಜ್ಞಾನಿಯ ಬಳಿಗೆ ಹೋಗಿ ಶರಣಾಗಿ ಬ್ರಹ್ಮವಿದ್ಯೆಯನ್ನು ಪಡೆಯುತ್ತಾನೆ ಎಂದು ಎರಡನೆಯ ಖಂಡದಲ್ಲಿದೆ.

ಮೂರನೆಯ ಖಂಡದಲ್ಲಿ ಹೇಳಿರುವುದೇನೆಂದರೆ —

**ತದೇತತ್ ಸತ್ಯಂ - ಯಥಾ ಸುದೀಪ್ತಾತ್ ಪಾವಕಾದ್ ವಿಸ್ಫುಲಿಂಗಾಃ**
**ಸಹಸ್ರಶಃ ಪ್ರಭವಂತೇ ಸರೂಪಾಃ।**
**ತಥಾಕ್ಷರಾದ್ ವಿವಿಧಾಃ ಸೋಮ್ಯ ಭಾವಾಃ**
**ಪ್ರಜಾಯಂತೇ ತತ್ರ ಚೈವಾಪಿಯಂತಿ॥**

"ಉರಿಯಾದ ಬೆಂಕಿಯಿಂದ ಕಿಡಿಗಳು ಹೇಗೆ ಬಹುಸಂಖ್ಯೆಯಲ್ಲಿ ಹೊಮ್ಮು ತ್ತವೆಯೋ ಹಾಗೆಯೇ ಕ್ಷಯವಿಲ್ಲದ ಬ್ರಹ್ಮದಿಂದ ಜೀವಗಳು ಬೆಂಕಿಗೆ ಸದೃಶವಾಗಿಯೇ ಹೊರಹೊಮ್ಮುತ್ತವೆ. ದೇಹವೆಂಬ ಉಪಾಧಿಯು ಹೋದಮೇಲೆ ಆ ಜೀವಗಳು ಬ್ರಹ್ಮವಸ್ತುವಿನಲ್ಲಿಯೇ ಸೇರಿಹೋಗುತ್ತವೆ."

ಈ ಪರಬ್ರಹ್ಮಕ್ಕೆ ಪ್ರಾಣವೆಂಬ ಇನ್ನೊಂದು ವಸ್ತುವಾಗಲಿ ಮನಸ್ಸು ಮುಂತಾದ ಇಂದ್ರಿಯಗಳಾಗಲಿ ಇಲ್ಲ. ಇದರಿಂದಲೇ ಪ್ರಾಣ, ಮನಸ್ಸು, ಇಂದ್ರಿಯ, ಪೃಥ್ವಿ ಮುಂತಾದ ಸಕಲವಸ್ತುಗಳು ಹುಟ್ಟುತ್ತವೆ.

**ಪುರುಷ ಏವೇದಂ ವಿಶ್ವಂ ಕರ್ಮ ತಪಃ** — ಎಂದು ಮೂರನೆಯ ಖಂಡದಲ್ಲಿ ಹೇಳಿದೆ.

ನಾಲ್ಕನೆಯ ಖಂಡದ ವಾಕ್ಯ ಇದು:

***ಪ್ರಣವೋ ಧನುಃ ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ।***
***ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್॥***

"ಪ್ರಣವವು ಧನುಸ್ಸು, ತಾನು ಶರವೆಂದೂ ಪರಬ್ರಹ್ಮವು ಗುರಿ ಎಂದೂ ಉಕ್ತವಾಗಿದೆ. ಎಚ್ಚರಿಕೆಯಿಂದ ಗುರಿಯನ್ನು ಹೊಡೆಯಬೇಕು. ಶರವು ಗುರಿಯಲ್ಲಿ ಸೇರಿಹೋಗುವಂತೆ ಎಚ್ಚರಿಕೆಯಿಂದ ಹೊಡೆದಾಗ ಆತ್ಮವು ಗುರಿಯಲ್ಲಿ ಸೇರಿ ಹೋಗುತ್ತದೆ."

ಓಂಕಾರಬೋಧ್ಯವಾದ ಬ್ರಹ್ಮವು ತಾನೆಂದು ತಿಳಿದು ಜಿತೇಂದ್ರಿಯನಾಗಿ ಬ್ರಹ್ಮಸ್ವರೂಪವಾಗುವುದೇ ತನ್ನ ಪರಮಲಕ್ಷ್ಯವೆಂದು ಭಾವಿಸುತ್ತಿದ್ದರೆ ತಾನು ಬ್ರಹ್ಮವೇ ಆಗಿಬಿಡುತ್ತಾನೆ ಎಂದು ತಾತ್ಪರ್ಯ.

ಆ ಪರಮಾತ್ಮನ ಸಾಕ್ಷಾತ್ಕಾರವಾದಾಗ ಅಂತಃಕರಣದಲ್ಲಿರುವ ನಾನಾ ಜನ್ಮದ ವಾಸನೆಗಳ ಕಗ್ಗಂಟು ಬಿಚ್ಚಿಹೋಗುತ್ತದೆ. ಸಮಸ್ತ ಸಂಶಯಗಳೂ ನೀಗುತ್ತವೆ. ಎಲ್ಲ ಕರ್ಮಗಳೂ ನಾಶವಾಗುತ್ತವೆ.

ಸ್ವಯಂಪ್ರಕಾಶನಾದ ಪರಮಾತ್ಮನ ಬಳಿ ಸೂರ್ಯನು ಪ್ರಕಾಶಿಸುವುದಿಲ್ಲ. ಚಂದ್ರ ತಾರಕೆಗಳೂ ಬೆಳಗುವುದಿಲ್ಲ. ವಿದ್ಯುತ್ತುಗಳೂ ಬೆಳಗಲಾರವು. ಹೀಗಿರುವಾಗ ಅಗ್ನಿಯು ಪ್ರಕಾಶಿಸಲಾರನೆಂದು ಹೇಳಬೇಕೆ? ದೇದೀಪ್ಯನಾದ ಆತನ ಬೆಳಕಿನಿಂದಲೇ ವಿಶ್ವದ ಸಮಸ್ತ ವಸ್ತುಗಳೂ ಬೆಳಗುತ್ತವೆ. ಅಂತಹ ಸ್ವಯಂಜ್ಯೋತಿ ಪರಬ್ರಹ್ಮ.

ಎದುರಿಗಿರುವುದೆಲ್ಲವೂ ಬ್ರಹ್ಮವೇ. ಹಿಂದುಗಡೆ ಇರುವುದೂ ಬ್ರಹ್ಮವೇ. ಎಡಕ್ಕೆ ಬಲಕ್ಕೆ, ಮೇಲೆ ಕೆಳಗೆ — ಈ ಪ್ರಕಾರ ಸಮಸ್ತವಿಶ್ವವೂ ಪರಮೋತ್ತಮವಾದ ಬ್ರಹ್ಮವೇ ಆಗಿದೆ — ಎಂದು ದ್ವಿತೀಯ ಮುಂಡಕದ ಎರಡನೆಯ ಖಂಡದಲ್ಲಿದೆ. ಇದು ಮುಂಡಕದ ನಾಲ್ಕನೆಯ ಖಂಡ.

ಮೂರನೆಯ ಮುಂಡಕದ ಪ್ರಥಮಖಂಡದಲ್ಲಿ ಎಂದರೆ ಮುಂಡಕೋಪನಿಷತ್ತಿನ ಐದನೆಯ ಖಂಡದಲ್ಲಿ ಹೀಗೆ ಇದೆ:

**"ದ್ವಾ ಸುಪರ್ಣಾ ಸಯುಜಾ ಸಖಾಯಾ ಸಮಾನಂ ವೃಕ್ಷಂ ಪರಿಷಸ್ವಜಾತೇ"** ಎಂಬ ಮಂತ್ರವು ಇಲ್ಲಿ ಬರುತ್ತದೆ. ಶರೀರವೆಂಬ ವೃಕ್ಷದಲ್ಲಿ ಜೀವಾತ್ಮ ಪರಮಾತ್ಮರೆಂಬ ಎರಡು ಹಕ್ಕಿಗಳಿವೆಯೆಂದೂ ಅವುಗಳಲ್ಲೊಂದು — ಜೀವಾತ್ಮನೆಂಬ ಹಕ್ಕಿಯು ಕರ್ಮಫಲವನ್ನು ಭೋಗಿಸುವುದೆಂದೂ ಪರಮಾತ್ಮವೆಂಬ ಹಕ್ಕಿಯು ಕರ್ಮಫಲವನ್ನು ಅನುಭವಿಸದೆ ಪ್ರಕಾಶಿಸುತ್ತಿರುವುದೆಂದೂ ದ್ವೈತಿಗಳು ಮಂತ್ರಾರ್ಥವನ್ನು ಹೇಳುತ್ತಾರೆ.

ಶ್ರೀಶಂಕರಾಚಾರ್ಯರ ಭಾಷ್ಯದಲ್ಲಿ ಅರ್ಥವು ಈ ಪ್ರಕಾರವಾಗಿದೆ. ಪೂರ್ವಾಪರ ವಿರೋಧವಿಲ್ಲದಂತೆ ಅರ್ಥವನ್ನು ವಿವರಿಸಬೇಕಾಗಿರುವುದರಿಂದ ಹೀಗೆ ಹೇಳುತ್ತಾರೆ. **'ಊರ್ಧ್ವಮೂಲಮಧಃ ಶಾಖಮಶ್ವತ್ಥಂ ಪ್ರಾಹುರವ್ಯಯಂ'** ಎಂಬ ವಚನವನ್ನಿಲ್ಲಿ ಸ್ಮರಿಸಿಕೊಳ್ಳಬೇಕು. ವೃಕ್ಷ = ಶರೀರ. ದ್ವಾ ಸುಪರ್ಣಾ = ಎರಡು ಪಕ್ಷಿಗಳು. ಲಿಂಗೋಪಾಧಿಯುಳ್ಳ ಜೀವಾತ್ಮನು ಒಂದು ಪಕ್ಷಿ; ಮಾಯೋಪಾಧಿಕನಾದ ಈಶ್ವರನು ಇನ್ನೊಂದು ಪಕ್ಷಿ. ಕರ್ಮಫಲವಾದ ಸುಖದುಃಖಗಳನ್ನು ಜೀವನು ಅನುಭವಿಸುತ್ತಾನೆ. ನಿತ್ಯಶುದ್ಧಬುದ್ಧಮುಕ್ತಸ್ವರೂಪನಾದ ಈಶ್ವರನು ಯಾವ ಕರ್ಮಫಲವನ್ನೂ ಅನುಭವಿಸುವುದಿಲ್ಲ. ಆತನು ಕೇವಲ ಸಾಕ್ಷಿಯಾಗಿರುತ್ತಾನೆ. ಒಬ್ಬನೇ ಆತ್ಮನು ಉಪಾಧಿಭೇದದಿಂದ ಎರಡಾಗಿ ತೋರುತ್ತಾನೆ.

ಆರನೆಯ ಖಂಡದಲ್ಲಿ ಹೀಗಿದೆ:

**'ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ ಸಂನ್ಯಾಸಯೋಗಾದ್ಯತಯಃ ಶುದ್ಧ ಸತ್ತ್ವಾಃ'** ಎಂಬ ಪ್ರಸಿದ್ಧಮಂತ್ರವು ಇಲ್ಲಿ ಬಂದಿದೆ.

ಮೋಕ್ಷಕಾಲದಲ್ಲಿ ದೇಹಾರಂಭಕಗಳಾದ ಪಂಚಭೂತಾಂಶಗಳು ಮಹಾಭೂತ ಗಳಲ್ಲಿ ಸೇರಿಹೋಗುತ್ತವೆ. ಜ್ಞಾನೇಂದ್ರಿಯಗಳೂ ಕರ್ಮೇಂದ್ರಿಯಗಳೂ ತಮ್ಮ ತಮ್ಮ ಅಧಿದೇವತೆಗಳಲ್ಲಿ ಸೇರುತ್ತವೆ. ವಿಜ್ಞಾನಮಯನಾದ ಜೀವನು ಅದ್ವಯವೂ ಅಮೃತವೂ ಆದ ಪರಬ್ರಹ್ಮದಲ್ಲಿ ಕೂಡಿಹೋಗುತ್ತಾನೆ. ಹರಿಯುವ ನದಿಗಳು ಔಪಾಧಿಕವಾದ ನಾಮರೂಪಗಳನ್ನು ಪರಿತ್ಯಜಿಸಿ ಸಮುದ್ರದಲ್ಲಿ ಕೂಡಿಹೋಗುವಂತೆ ಬ್ರಹ್ಮಜ್ಞಾನಿಯು ಔಪಾಧಿಕಗಳಾದ ನಾಮರೂಪಗಳನ್ನು ತ್ಯಜಿಸಿ ಪರಬ್ರಹ್ಮದಲ್ಲಿ ಲೀನನಾಗಿಬಿಡುತ್ತಾನೆ.

**'ನಮಃ ಪರಮಋಷಿಭ್ಯೋ ನಮಃ ಪರಮಋಷಿಭ್ಯಃ'** — ಇದು ಸಮಾಪ್ತಿವಚನ.

## ೬. ಮಾಂಡೂಕ್ಯೋಪನಿಷತ್ತು

ಇದು ಅಥರ್ವವೇದಕ್ಕೆ ಸೇರಿದೆ. ಇದರಲ್ಲಿ ಹನ್ನೆರಡು ಮಂತ್ರಗಳಿವೆ. ಈ ಮಾಂಡೂಕ್ಯೋಪನಿಷತ್ತು ಉಪನಿಷತ್ತುಗಳಲ್ಲಿ ಬಹಳ ಚಿಕ್ಕದು. ಆದರೆ **ಮಾಂಡೂಕ್ಯಮೇಕಮೇವಾಲಂ ಮುಮುಕ್ಷೂಣಾಂ ವಿಮುಕ್ತಯೇ** ಎಂಬ ವಚನವು ಇದರ ಮಹತ್ತ್ವವನ್ನು ಸೂಚಿಸುತ್ತದೆ. ಅವಸ್ಥಾತ್ರಯಪರೀಕ್ಷೆಗೆ ಮಾತೃಸ್ಥಾನವಾದದ್ದು ಈ ಉಪನಿಷತ್ತು. ಇದು ಅನುಭವಪರ್ಯವಸಾಯಿಯಾದ್ದರಿಂದ ವೇದಾಂತ ಸೌಧದ ತಳಹದಿಯೂ ಹೌದು, ಶಿಖರವೂ ಹೌದು. ಈ ಕಾರಣದಿಂದ ಶ್ರೀಗೌಡಪಾದಾಚಾರ್ಯರು ಮಾಂಡೂಕ್ಯೋಪನಿಷತ್ತಿಗೆ ವಿಸ್ತಾರವಾಗಿ ಕಾರಿಕೆಗಳನ್ನು ರಚಿಸಿದ್ದಾರೆ. ಕಾರಿಕೆಗಳನ್ನು ಆಗಮಪ್ರಕರಣ, ವೈತಥ್ಯಪ್ರಕರಣ, ಅದ್ವೈತಪ್ರಕರಣ, ಅಲಾತಶಾಂತಿಪ್ರಕರಣವೆಂದು ನಾಲ್ಕು ವಿಭಾಗಗಳನ್ನಾಗಿ ವಿಂಗಡಿಸಲಾಗಿದೆ. ಮೊದಲನೆಯ ಆಗಮಪ್ರಕರಣವು ಮಾಂಡೂಕ್ಯೋಪನಿಷತ್ತಿನ ವ್ಯಾಖ್ಯಾನರೂಪವಾದದ್ದು. ಆಗಮವೆಂದರೆ ವೇದ. ಉಪನಿಷತ್ತನ್ನೂ ಈ ಪ್ರಕರಣದ ಕಾರಿಕೆಗಳನ್ನೂ ಸೇರಿಸಿ ಆಗಮಪ್ರಕರಣವೆಂದು ವ್ಯವಹರಿಸುತ್ತಾರೆ. ಉಳಿದ ಮೂರು ಪ್ರಕರಣಗಳು ಆಗಮಪ್ರಕರಣದ ತಳಹದಿಯಮೇಲೆ ರಚಿಸಿದ ವೇದಾಂತಸೌಧವೆನ್ನಬಹುದು. ಇದು ವೇದಾಂತಾರ್ಥಸಾರ ಸಂಗ್ರಹರೂಪವಾಗಿದ್ದು ವೇದಾಂತಸೌಧದ ಶಿಖರವನ್ನು ಮುಟ್ಟಿಸುತ್ತದೆ. ಈ ಕಾರಣದಿಂದಲೇ ಶ್ರೀಶಂಕರಾಚಾರ್ಯರು ಉಪನಿಷತ್ತಿನೊಡನೆ ಗೌಡಪಾದಕಾರಿಕೆಗಳಿಗೂ ಭಾಷ್ಯವನ್ನು ರಚಿಸಿದ್ದಾರೆ. ಆದ್ದರಿಂದಲೇ ಶ್ರೀಶಂಕರರು **'ವೇದಾಂತಾರ್ಥಸಾರಸಂಗ್ರಹಭೂತಮಿದಂ ಪ್ರಕರಣಚತುಷ್ಟಯಂ'** ಎಂದು ಬರೆದಿದ್ದಾರೆ. ಈ ಉಪನಿಷತ್ತು ಅತ್ಯಂತ ಸಂಕ್ಷಿಪ್ತವೂ ಮಾರ್ಮಿಕವೂ ಆದ್ದರಿಂದ ಗೌಡಪಾದೀಯಕಾರಿಕೆಗಳನ್ನು ಸೇರಿಸಿ ವ್ಯಾಖ್ಯಾನಮಾಡುವುದು ಅನಿವಾರ್ಯವಾಯಿತು. ಅವಸ್ಥಾತ್ರಯಪರೀಕ್ಷೆಗೂ ಅದರಿಂದ ಹೊರಡುವ ಸಿದ್ಧಾಂತಕ್ಕೂ ಈ ಪ್ರಕರಣಗಳು ಮೀಸಲಾದ್ದರಿಂದ ವೇದಾಂತಶಾಸ್ತ್ರದ ಎಲ್ಲಾ ಪ್ರಮೇಯಗಳೂ ಇಲ್ಲಿ ಬಂದಿಲ್ಲ. ಆದ್ದರಿಂದ ಈ ಕಾರಿಕೆಗಳನ್ನು ಪ್ರಕರಣಗಳೆಂದು ಕರೆಯುತ್ತಾರೆ.

**'ಓಮಿತ್ಯೇತದಕ್ಷರಮಿದಂ ಸರ್ವಂ'** ಎಂದು ಉಪನಿಷತ್ತು ಆರಂಭವಾಗುತ್ತದೆ. ವರ್ತಮಾನ ಭೂತ ಭವಿಷ್ಯತ್ತುಗಳಿಗೆ ಸಂಬಂಧಿಸಿದ ಸಮಸ್ತ ವಸ್ತುಗಳೂ ಓಂಕಾರವೇ ಎಂದರ್ಥ. ಓಂಕಾರವು ಶಬ್ದವಾದರೂ ಶಬ್ದಾರ್ಥಗಳಿಗೆ ಅಭೇದವಿರುವುದರಿಂದ ಓಂಕಾರವೆಂದರೆ ಬ್ರಹ್ಮವೆಂದೇ ತಿಳಿಯಬೇಕು. **ಸರ್ವಂ ಹ್ಯೇತದ್ ಬ್ರಹ್ಮ। ಅಯಮಾತ್ಮಾ ಬ್ರಹ್ಮ** — ಎಂದು ಎರಡನೆಯ ಮಂತ್ರದಲ್ಲಿದೆ. 'ಸರ್ವವೂ

ಬ್ರಹ್ಮವೇ. ಈ ಆತ್ಮನೂ ಬ್ರಹ್ಮವೇ' ಎಂದು ಹೇಳುತ್ತದೆ. ಇಲ್ಲಿ ಆತ್ಮವೆಂದರೆ ಯಾರು? ಜೀವಾತ್ಮನೆಂದೇ ಹೇಳಬೇಕಾಗುತ್ತದೆ; 'ಅಯಮಾತ್ಮಾ ಬ್ರಹ್ಮ' ಎನ್ನುವುದು ಅದ್ವೈತ ಸಂಪ್ರದಾಯದ ಪ್ರಕಾರ. ಈ ಜೀವಾತ್ಮನೆನಿಸಿಕೊಂಡಿರುವ ಬ್ರಹ್ಮಕ್ಕೆ ನಾಲ್ಕು ಪಾದಗಳು. ಜಾಗರಿತಸ್ಥಾನದಲ್ಲಿರುವ ವಿಶ್ವ, ಸ್ವಪ್ನಸ್ಥಾನದಲ್ಲಿರುವ ತೈಜಸ, ಸುಷುಪ್ತಿ ಸ್ಥಾನದಲ್ಲಿರುವ ಪ್ರಾಜ್ಞ — ಇವು ಮೂರು ಪಾದಗಳು. ಈ ಅವಸ್ಥಾತ್ರಯಕ್ಕೆ ಅತೀತವಾದ ಪರಬ್ರಹ್ಮವು ಚತುರ್ಥ. ಇದನ್ನು ತುರೀಯವೆಂದೂ ಹೇಳುತ್ತಾರೆ. ಇನ್ನು ಶಬ್ದಬ್ರಹ್ಮವಾದ ಓಂಕಾರವನ್ನು ನಾಲ್ಕು ಭಾಗಗಳನ್ನಾಗಿ ವಿಂಗಡಿಸಲಾಗಿದೆ. ಅ, ಉ, ಮ್ — ಇವು ಮೂರು. ಓಂಕಾರದಿಂದ ಅನುರಣಿತವಾದ ನಾದವು ನಾಲ್ಕನೆಯದು.

**'ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯಂತೇ। ಸ ಆತ್ಮಾ ಸ ವಿಜ್ಞೇಯಃ'** ಎಂಬ ಮಾತು ಈ ಉಪನಿಷತ್ತಿನಲ್ಲಿದೆ. ಈ ಉಪನಿಷತ್ತು ಅದ್ವೈತಸಿದ್ಧಾಂತಕ್ಕೆ ಸಮಂಜಸವಾಗಿ ಹೊಂದಿಕೊಳ್ಳುತ್ತದೆ. ದ್ವೈತಪರವಾಗಿ ಸಮಂಜಸವಾದ ಅರ್ಥವನ್ನು ಹೇಳುವುದು ಕಠಿಣವೇ ಸರಿ.

ವೇದಾಂತವನ್ನು ಎಲ್ಲರ ಅನುಭವಕ್ಕೆ ತಂದುಕೊಡುವ ಶಕ್ತಿಶಾಲಿಯಾದ ಉಪನಿಷತ್ತು ಇದು.

## ೭. ತೈತ್ತಿರೀಯೋಪನಿಷತ್ತು

ಕೃಷ್ಣಯಜುರ್ವೇದದ ತೈತ್ತಿರೀಯಶಾಖೆಗೆ ಇದು ಸೇರಿದೆ. ಇದನ್ನು ಶಿಕ್ಷಾವಲ್ಲಿ, ಆನಂದವಲ್ಲಿ, ಭೃಗುವಲ್ಲಿ ಎಂದು ಮೂರು ವಲ್ಲಿಗಳನ್ನಾಗಿ ವಿಂಗಡಿಸಿದ್ದಾರೆ. ಆನಂದ ವಲ್ಲಿಯನ್ನು ಬ್ರಹ್ಮವಲ್ಲಿಯೆಂದೂ ಹೇಳುವುದುಂಟು. ಶಿಕ್ಷಾವಲ್ಲಿಯಲ್ಲಿ ಹನ್ನೆರಡು ಅನುವಾಕಗಳೂ ಆನಂದವಲ್ಲಿಯಲ್ಲಿ ಒಂಬತ್ತು ಅನುವಾಕಗಳೂ ಭೃಗುವಲ್ಲಿಯಲ್ಲಿ ಹತ್ತು ಅನುವಾಕಗಳೂ ಇವೆ. **'ಶಂ ನೋ ಮಿತ್ರಃ ಶಂ ವರುಣಃ ....'** ಎಂಬುದು ಮೂರು ವಲ್ಲಿಗಳಿಗೂ ಶಾಂತಿಮಂತ್ರ. ಸಾಮಾನ್ಯವಾಗಿ ಹತ್ತು ವಾಕ್ಯಗಳಿಗೆ ಒಂದು ಅನುವಾಕವೆಂದು ಹೆಸರು. ಆದ್ಯಂತಗಳಲ್ಲಿ ಪಠಿತವಾದ **'ಶಂ ನೋ ಮಿತ್ರಃ'** ಎಂಬ ಉಭಯ ಅನುವಾಕಗಳನ್ನು ಸೇರಿಸಿದಾಗ ಶಿಕ್ಷಾವಲ್ಲಿಯಲ್ಲಿ ಹನ್ನೆರಡು ಅನುವಾಕ ಗಳಾಗುತ್ತವೆ.

### ಅ. ಶಿಕ್ಷಾವಲ್ಲಿ

ವರ್ಣಾದ್ಯುಚ್ಚಾರಣವು ಸಕ್ರಮವಾಗಿರಬೇಕೆಂದು ತಿಳಿಸುವುದರಿಂದಲೂ ಗುರು ಕುಲವಾಸವಾದಮೇಲೆ ಶಿಷ್ಯನು ತನ್ನ ಮನೆಗೆ ಹೊರಡುವಾಗ ಆತನ ಆಚಾರ

ವಿಚಾರಗಳು ಹೇಗಿರಬೇಕೆಂದು ಶಿಕ್ಷಣವನ್ನೀಯುವುದರಿಂದಲೂ ಶೀಕ್ಷಾ ಎಂದು ಹೆಸರು. ಉಪನಿಷತ್ತಿನಲ್ಲಿ ಇಕಾರಕ್ಕೆ ಛಾಂದಸವಾದ ದೀರ್ಘವು ಬಂದು 'ಶೀಕ್ಷಾ' ಎಂದು ಪಠಿತವಾಗಿದೆ.

ಗುರುಶಿಷ್ಯರಿಗೆ ಅನ್ಯೋನ್ಯವಾದ ಪ್ರೀತ್ಯಾದರಗಳಿರಲೆಂದೂ ಉಭಯರಿಗೂ ಶುಭವಾಗಲೆಂದೂ ಈ ಉಪನಿಷತ್ತು ಹಾರೈಸುತ್ತದೆ. ಬ್ರಹ್ಮಚಾರಿಗಳು ಅಧ್ಯಯನಕ್ಕಾಗಿ ಸದಾ ತನ್ನ ಬಳಿಗೆ ಬರಲೆಂದು ಆಚಾರ್ಯನು ಬಯಸುತ್ತಾನೆ. ಭೂಃ ಭುವಃ — ಇತ್ಯಾದಿ ಮಹಾವ್ಯಾಹೃತಿಗಳ ಅರ್ಥವನ್ನು ನಿರೂಪಿಸಲಾಗಿದೆ. ಅವುಗಳ ಉಪಾಸನಾ ಪ್ರಕಾರವೂ ಇದೆ. **'ಓಮಿತಿ ಬ್ರಹ್ಮ, ಓಮಿತೀದಗ್ಂ ಸರ್ವಂ'** ಎಂಬ ಮಾತು ಶಿಕ್ಷಾವಲ್ಲಿಯಲ್ಲಿ ಬಂದಿದೆ. ಕರ್ಮಕಾಂಡಬ್ರಹ್ಮಕಾಂಡಗಳಿಗೆ ಒಂದು ಸಂಬಂಧವನ್ನು ಕಲ್ಪಿಸುವ ಕೊಂಡಿ ಶಿಕ್ಷಾವಲ್ಲಿ.

## ಆ. ಆನಂದವಲ್ಲಿ

ಬ್ರಹ್ಮಾನಂದದ ಸ್ವರೂಪವರ್ಣನೆ ಇರುವುದರಿಂದ ಆನಂದವಲ್ಲಿಯೆಂದೂ **'ಬ್ರಹ್ಮವಿದಾಪ್ನೋತಿ ಪರಂ'** ಎಂಬ ಪ್ರಥಮವಾಕ್ಯದಲ್ಲಿ ಬ್ರಹ್ಮಪದವು ಆರಂಭ ದಲ್ಲಿರುವುದರಿಂದ ಬ್ರಹ್ಮವಲ್ಲಿಯೆಂದೂ ಇದಕ್ಕೆ ಹೆಸರು. **'ಸತ್ಯಂ ಜ್ಞಾನಮನಂತಂ ಬ್ರಹ್ಮ'** ಎಂಬ ವಾಕ್ಯವು ಪ್ರಥಮಾನುವಾಕದಲ್ಲಿಯೇ ಇದ್ದು, ಬ್ರಹ್ಮದ ಸ್ವರೂಪ ಲಕ್ಷಣವನ್ನು ತಿಳಿಸುತ್ತದೆ. ಆತ್ಮನಿಂದ ಆಕಾಶಾದಿ ಪಂಚಭೂತಗಳು ಕ್ರಮವಾಗಿ ಹುಟ್ಟಿದವು. ಇದೆಲ್ಲವನ್ನೂ ಸೃಷ್ಟಿಸಿ ಬ್ರಹ್ಮವು ಅದರೊಳಗೆ ಪ್ರವೇಶಿಸಿತು. ಅನಂತರ **ಸಚ್ಚ ತ್ಯಚ್ಚಾಭವತ್**. ಸತ್ = ಮೂರ್ತವಸ್ತು, ತ್ಯತ್ = ಅಮೂರ್ತ. ಬ್ರಹ್ಮಾನಂದವು ಎಷ್ಟು ದೊಡ್ಡದು, ಅದರ ಪ್ರಮಾಣವೇನು — ಎಂಬುದನ್ನು ಈ ವಲ್ಲಿಯು ಬಹುಸುಂದರವಾಗಿ ನಿರೂಪಿಸಿದೆ. ಬ್ರಹ್ಮವು ವಾಕ್ಕಿಗೂ ಮನಸ್ಸಿಗೂ ನಿಲುಕತಕ್ಕದ್ದಲ್ಲ. ಬ್ರಹ್ಮವಿದನು ಯಾವುದಕ್ಕೂ ಹೆದರುವುದಿಲ್ಲ. ಭೀತಿಯೇ ಅವನ ಬಳಿ ಸುಳಿಯದು.

## ಇ. ಭೃಗುವಲ್ಲಿ

ವರುಣನ ಮಗನಾದ ಭೃಗು ತನಗೆ ಬ್ರಹ್ಮವನ್ನು ಉಪದೇಶಿಸಬೇಕೆಂದು ತಂದೆಯನ್ನು ಪ್ರಾರ್ಥಿಸುತ್ತಾನೆ. ವರುಣನು 'ತಪಸ್ಸು ಮಾಡಿ ಬ್ರಹ್ಮವನ್ನು ತಿಳಿದುಕೊ. ಅದನ್ನು ತಿಳಿಯಲು ತಪಸ್ಸೇ ಉತ್ತಮವಾದ ಸಾಧನ' ಎಂದುಬಿಡುತ್ತಾನೆ. ತಪಸ್ಸೆಂದರೆ ಇಂದ್ರಿಯಗಳನ್ನು ನಿಗ್ರಹಿಸಿ ಏಕಾಗ್ರತೆಯಿಂದ ಮಾಡುವ ತತ್ತ್ವಚಿಂತನೆ. ಭೃಗುವು ತಪಸ್ಸನ್ನಾಚರಿಸಿ 'ಅನ್ನವು ಬ್ರಹ್ಮ' ಎಂದು ತಂದೆಗೆ ಹೇಳುತ್ತಾನೆ. ವರುಣನು 'ಇನ್ನೂ

ತಪಸ್ಸು ಮಾಡು' ಎಂದು ಪುತ್ರನಿಗೆ ಹೇಳುತ್ತಾನೆ. ಭೃಗುವು ತಪಸ್ಸುಮಾಡಿ ಪ್ರಾಣವು ಬ್ರಹ್ಮ, ಮನಸ್ಸು ಬ್ರಹ್ಮ, ವಿಜ್ಞಾನವು ಬ್ರಹ್ಮ — ಎಂಬ ತೀರ್ಮಾನಕ್ಕೆ ಬಂದಾಗ ವರುಣನು ಅದೆಲ್ಲವನ್ನೂ ಅಲ್ಲಗಳೆಯುತ್ತಾನೆ. ಭೃಗುವು ಕಡೆಯಲ್ಲಿ ಆನಂದವೇ ಬ್ರಹ್ಮ ಎಂಬ ಸಿದ್ಧಾಂತಕ್ಕೆ ಬರುತ್ತಾನೆ.

ಈ ಮೂರು ವಲ್ಲಿಗಳೂ ಸರಳವಾದ ಗದ್ಯವಾಕ್ಯಗಳಲ್ಲಿವೆ. ಶಬ್ದಾರ್ಥಜ್ಞಾನವು ಸುಲಭ. ಸುಲಭವಾಕ್ಯಗಳಿಂದ ಗಹನವಾದ ವಸ್ತುವನ್ನು ಈ ಮೂರು ವಲ್ಲಿಗಳೂ ತಿಳಿಸಿಕೊಡುತ್ತವೆ.

### ೮. ಐತರೇಯೋಪನಿಷತ್ತು

ಇದು ಋಗ್ವೇದಕ್ಕೆ ಸೇರಿದುದು. ಇದು ಐತರೇಯಾರಣ್ಯಕದ ನಾಲ್ಕು, ಐದು, ಆರನೆಯ ಅಧ್ಯಾಯರೂಪವಾದದ್ದು. ಈ ಉಪನಿಷತ್ತನ್ನು ಆರು ಖಂಡಗಳನ್ನಾಗಿ ವಿಭಜಿಸಿದ್ದಾರೆ. ಆದ್ದರಿಂದ ಈ ಉಪನಿಷತ್ತಿಗೆ ಆತ್ಮಷಟ್ಕವೆಂದೂ ಹೆಸರಿದೆ. **'ವಾಙ್ ಮೇ ಮನಸಿ ಪ್ರತಿಷ್ಠಿತಾ...'** ಎಂಬುದು ಶಾಂತಿಮಂತ್ರ.

**'ಆತ್ಮಾ ವಾ ಇದಮೇಕ ಏವಾಗ್ರ ಆಸೀತ್'** — ಸೃಷ್ಟಿಗೆ ಪೂರ್ವದಲ್ಲಿ ಈ ಜಗತ್ತೆಲ್ಲವೂ ಪರಮಾತ್ಮನೊಬ್ಬನೇ ಆಗಿತ್ತು — ಎಂದು ಇದು ಆರಂಭವಾಗುತ್ತದೆ. **ನಾನ್ಯತ್ ಕಿಂಚನ ಮಿಷತ್** = ಇನ್ನೊಂದು ವಸ್ತುವೂ ಇರಲಿಲ್ಲ. ನಾಲ್ಕು ಮಹಾ ವಾಕ್ಯಗಳಲ್ಲೊಂದಾದ **'ಪ್ರಜ್ಞಾನಂ ಬ್ರಹ್ಮ'** ಎಂಬ ವಾಕ್ಯವು ಈ ಐತರೇಯದಲ್ಲಿದೆ.

ಈಶ್ವರನು ಮನುಷ್ಯನನ್ನು ಸೃಷ್ಟಿಸಿ, ಆತನ ತಲೆಯನ್ನು ಸೀಳಿ ದೇಹದೊಳಗೆ ಪ್ರವೇಶಿಸಿದನು. ಪ್ರವಿಷ್ಟನಾದ ಈಶ್ವರನಿಗೆ ತಂದೆಯ ದೇಹ, ತಾಯಿಯ ಗರ್ಭ, ಈ ಶರೀರ — ಇವು ಮೂರು ವಾಸಗೃಹಗಳು. ಈತನಿಗೆ ಜಾಗರಿತ, ಸ್ವಪ್ನ, ಸುಷುಪ್ತಿಗಳೆಂಬ ಮೂರು ಕನಸುಗಳು ಬೀಳುತ್ತವೆ — ಇವೇ ಮೊದಲಾದ ಸಮಸ್ಯಾತ್ಮಕ ವಿಷಯಪ್ರಚುರವಾಗಿದೆ ಈ ಉಪನಿಷತ್ತು. ಸಂಜ್ಞಾನ, ಆಜ್ಞಾನ, ವಿಜ್ಞಾನ, ಪ್ರಜ್ಞಾನ, ಮೇಧಾ, ದೃಷ್ಟಿ, ಧೃತಿ, ಮತಿ, ಸ್ಮೃತಿ — ಇತ್ಯಾದಿಗಳೆಲ್ಲವೂ ಪ್ರಜ್ಞಾನದ ನಾಮಧೇಯಗಳು. ವ್ಯಾಖ್ಯಾನವಿಲ್ಲದೆ ಇವು ಅರ್ಥವಾಗತಕ್ಕವುಗಳಲ್ಲ. ಗಂಭೀರವಾದ ವಿಚಾರವಿದರಲ್ಲಿದೆ.

### ೯. ಛಾಂದೋಗ್ಯೋಪನಿಷತ್

ಇದು ಸಾಮವೇದಕ್ಕೆ ಸೇರಿದ ಎಂಟು ಅಧ್ಯಾಯಗಳಿರುವ ಉಪನಿಷತ್ತು. ಅಧ್ಯಾಯವನ್ನು ಪ್ರಪಾಠಕವೆಂದೂ ಕರೆಯುತ್ತಾರೆ. ಒಂದೊಂದು ಅಧ್ಯಾಯವನ್ನೂ

ಹಲವಾರು ಖಂಡಗಳನ್ನಾಗಿ ವಿಭಜಿಸಿದ್ದಾರೆ. ಒಟ್ಟು ೧೫೪ ಖಂಡಗಳಿವೆ.

ಮೊದಲನೆಯ ಐದು ಅಧ್ಯಾಯಗಳು ನಾನಾ ಬಗೆಯ ಉಪಾಸನೆಗಳಿಗೆ ಮೀಸಲಾದವು. ಆದಿಯಲ್ಲಿ ಕರ್ಮಾಂಗವಾದ ಉಪಾಸನೆಯ ವಿಚಾರ ಬಂದಿದೆ. ಅನಂತರ ಕೇವಲ ಉಪಾಸನೆಗಳ ವಿವರವಿದೆ. ಉಪಾಸನೆಗೆ ಉಪಯುಕ್ತವಾದ ಅನೇಕ ವಿದ್ಯೆಗಳ ವಿವರಗಳು ಇಲ್ಲಿ ಬರುತ್ತವೆ.

ಓಂಕಾರವು ಋಕ್ಕುಗಳ ರಸ, ಅದನ್ನು ಉಪಾಸನೆ ಮಾಡಬೇಕು ಎಂದು ಛಾಂದೋಗ್ಯದ ಆರಂಭವಾಕ್ಯವು ಹೇಳುತ್ತದೆ. ಇದು ಪರಮಾತ್ಮನ ವಾಚಕ ಶಬ್ದ-ಪ್ರತೀಕ. ಉಪಾಸನೆಯ ಪ್ರಕಾರಗಳು ವಿವಿಧದೃಷ್ಟಿಗಳಿಂದ ನಡೆಯತಕ್ಕದ್ದು. ಉಪಾಸನೆಯೆಂದರೆ ಏಕಾಗ್ರತೆಯಿಂದ ದೀರ್ಘಕಾಲದವರೆಗೆ ಉಪಾಸ್ಯದ ಧ್ಯಾನ. ಪ್ರಥಮಾಧ್ಯಾಯದಲ್ಲಿ ಓಂಕಾರದ ಮಹಿಮೆ ವರ್ಣಿತವಾಗಿದೆ.

ದ್ವಿತೀಯಾಧ್ಯಾಯ — ಹಿಂಕಾರ, ಪ್ರಸ್ತಾವ, ಉದ್ಗೀಥ, ಪ್ರತಿಹಾರ, ನಿಧನ ಎಂಬ ಪಂಚವಿಧಸಾಮಗಳ ಉಪಾಸನೆ ಇಲ್ಲಿ ಬಂದಿದೆ. ಅಲ್ಲದೆ ಆದಿ, ಉಪದ್ರವ ಎಂಬ ಎರಡು ಸಾಮಗಳನ್ನು ಸೇರಿಸಿ ಸಪ್ತವಿಧಸಾಮೋಪಾಸನೆಯೂ ಇದೆ. ಸಾಮೋಪಾಸನೆಗಳಲ್ಲಿ ಲೋಕದೃಷ್ಟಿ, ಅಗ್ನಿದೃಷ್ಟಿ, ಪ್ರಾಣದೃಷ್ಟಿ ಮುಂತಾದ ದೃಷ್ಟಿಭೇದಗಳೂ ಇವೆ.

ಮೂರನೆಯ ಅಧ್ಯಾಯದಲ್ಲಿ ಗಾಯತ್ರೀ, ಆದಿತ್ಯ, ಮನಸ್ಸು ಮುಂತಾದ ದೃಷ್ಟಿಭೇದಗಳಿರುವ ಬ್ರಹ್ಮೋಪಾಸನೆ ಮುಂತಾದವು ಬಂದಿವೆ. ಇವೆಲ್ಲವೂ ಚಿತ್ತಶುದ್ಧಿಗಾಗಿ ಮಾಡುವ ಉಪಾಸನೆಗಳು. ಇವೆಲ್ಲವೂ ಸಾವಿರಾರು ವರ್ಷಗಳ ಹಿಂದೆ ಪ್ರಚಾರದಲ್ಲಿದ್ದವೆಂದು ತೋರುತ್ತದೆ.

ಇದರಲ್ಲಿರುವ ಹದಿನೇಳನೆಯ ಖಂಡದಲ್ಲಿ ಘೋರ ಆಂಗಿರಸನು ದೇವಕೀ ಪುತ್ರನಾದ ಕೃಷ್ಣನಿಗೆ ಒಂದು ಯಜ್ಞವಿದ್ಯೆಯನ್ನು ಉಪದೇಶಿಸಿದನೆಂಬ ಕೌತುಕದ ವೃತ್ತಾಂತವಿದೆ. ಬ್ರಹ್ಮವೆಂಬ ಸ್ವಯಂಜ್ಯೋತಿಯ ಬಲದಿಂದ ಗಗನದಲ್ಲಿ ಬೆಳಗುತ್ತಿರುವ ಆದಿತ್ಯನನ್ನು ಬ್ರಹ್ಮವೆಂದು ಉಪಾಸನೆ ಮಾಡಬೇಕು ಎಂದು ಹೇಳಿದೆ.

ಚತುರ್ಥಾಧ್ಯಾಯದ ಆರಂಭದಲ್ಲಿಯೇ ಜಾನಶ್ರುತಿಯೆಂಬ ರಾಜನು ರೈಕ್ವನಿಂದ ತತ್ತ್ವೋಪದೇಶವನ್ನು ಪಡೆದನೆಂಬ ಕಥೆ ಬರುತ್ತದೆ. ಸಂವರ್ಗವಿದ್ಯೆಯ ವಿಚಾರ ಇಲ್ಲಿದೆ. ಸತ್ಯಕಾಮ ಜಾಬಾಲನ ವೃತ್ತಾಂತವು ನಾಲ್ಕನೆಯ ಖಂಡದಲ್ಲಿದೆ. ಹತ್ತನೆಯ ಖಂಡದಲ್ಲಿ ಉಪಕೋಸಲ ಕಾಮಲಾಯನನಿಗೆ ಗಾರ್ಹಪತ್ಯಾದಿ ಅಗ್ನಿಗಳು

**'ಕಂ ಬ್ರಹ್ಮ ಖಂ ಬ್ರಹ್ಮ'** ಎಂದು ಉಪದೇಶಿಸುತ್ತಿವೆ. **'ಯ ಏಷ ಆದಿತ್ಯೇ ಪುರುಷೋ ದೃಶ್ಯತೇ ಸೋऽಹಮಸ್ಮಿ ಸ ಏವಾಹಮಸ್ಮಿ'** ಎಂಬ ವಾಕ್ಯವು ಹನ್ನೊಂದನೆಯ ಖಂಡದಲ್ಲಿದೆ.

ಪಂಚಮಾಧ್ಯಾಯದ ಆರಂಭದಲ್ಲಿ ಪ್ರಾಣವು ಈ ದೇಹದಲ್ಲಿ ಶ್ರೇಷ್ಠವಾದದ್ದೆಂದೂ ಅದು ವಸಿಷ್ಠ ಎಂದೂ ವರ್ಣಿಸಿದೆ. ಪಂಚಾಗ್ನಿವಿದ್ಯೆಯು ಇಲ್ಲಿ ಪ್ರಸ್ತುತವಾಗಿದೆ. ಲೋಕ, ಪರ್ಜನ್ಯ, ಪೃಥಿವೀ, ಪುರುಷ, ಸ್ತ್ರೀ — ಇವರು ಪಂಚಾಗ್ನಿಗಳೆಂದು ರೂಪಿಸಲಾಗಿದೆ.

ಹೀಗೆ ಮೊದಲಿನ ಐದು ಅಧ್ಯಾಯಗಳಲ್ಲಿ ನಾನಾ ಬಗೆಯ ಉಪಾಸನೆಗಳೂ ಉಪಾಸನಾರ್ಥವಾದ ವಿವಿಧ ವಿದ್ಯೆಗಳೂ ಬಂದಿವೆ. ಆರನೆಯ ಅಧ್ಯಾಯದಿಂದ ಅಧ್ಯಾತ್ಮವಿದ್ಯೆಯು ಪ್ರಧಾನವಾಗಿ ವರ್ಣಿತವಾಗಿದೆ.

**ಷಷ್ಠಾಧ್ಯಾಯ**

ಅರುಣನ ಮಗ ಆರುಣಿ. ಈತನೇ ಉದ್ದಾಲಕ ಮಹರ್ಷಿ. ಇವನು ತನ್ನ ಪುತ್ರನಾದ ಶ್ವೇತಕೇತುವಿಗೆ ಉಪದೇಶಿಸಿದ ಆತ್ಮವಿದ್ಯೆ ಈ ಅಧ್ಯಾಯದಲ್ಲಿ ಬಂದಿದೆ. ಮನನೀಯವಾದ ಕೆಲವು ಉಪದೇಶವಾಕ್ಯಗಳನ್ನು ಕೆಳಗೆ ಸಂಗ್ರಹಿಸಲಾಗಿದೆ.

**೧. ಯಥಾ ಸೋಮ್ಯ ಏಕೇನ ಮೃತ್‌ಪಿಂಡೇನ ಸರ್ವಂ ಮೃನ್ಮಯಂ ವಿಜ್ಞಾತಂ ಸ್ಯಾತ್ ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್।**

ಮಣ್ಣಿನ ಮುದ್ದೆಯ ಸ್ವರೂಪವನ್ನರಿತರೆ ಮಣ್ಣಿನ ವಿಕಾರಗಳಾದ ಗಡಿಗೆ ಹೂಜಿ ಹಣತೆ ಮೊದಲಾದವುಗಳನ್ನು ಅರಿತಂತೆಯೇ ಸರಿ. ಗಡಿಗೆ ಮೊದಲಾದವು ಮಣ್ಣಿನ ವಿಕಾರಗಳು; ಕಾರಣವಾದ ಮಣ್ಣಿಗಿಂತ ಭಿನ್ನ ವಸ್ತುಗಳಲ್ಲ. ಹೆಸರುಗಳು ಮಾತ್ರ ಬೇರೆಬೇರೆಯಾಗಿರುತ್ತವೆ ಎಂದು ತಾತ್ಪರ್ಯ. ಹಾಗೆಯೇ ಬ್ರಹ್ಮವೆಂಬ ಸದ್ವಸ್ತುವನ್ನರಿತರೆ ಅದರ ವಿಕಾರಗಳಾದ ಸಮಸ್ತ ವಸ್ತುಗಳನ್ನೂ ಅರಿತಂತೆಯೇ ಸರಿ.

**೨. ಸದೇವ ಸೋಮ್ಯೇದಮಗ್ರ ಆಸೀತ್ ಏಕಮೇವಾದ್ವಿತೀಯಮ್।**

ಹೇ ಸೋಮ್ಯ, ಸೃಷ್ಟಿಗೆ ಪೂರ್ವದಲ್ಲಿ ಒಂದೇ ಒಂದು ಸದ್ವಸ್ತುವಿದ್ದಿತು. ಅದಕ್ಕೆ ಎರಡನೆಯದಾಗಿ ಇನ್ನೊಂದು ಇರಲಿಲ್ಲ.

**೩. ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ।**

ಈಶ್ವರನು ಜಗತ್ತನ್ನು ಸೃಷ್ಟಿಸಿ ಪ್ರತಿಯೊಬ್ಬರಲ್ಲಿಯೂ ಜೀವಸ್ವರೂಪದಿಂದ ಪ್ರವೇಶಿಸಿ ನಾಮರೂಪಗಳನ್ನು ವಿಸ್ತರಿಸುವೆನು ಎಂದು ಆಲೋಚಿಸಿದನು.

**೪. ತತ್ ಸತ್ಯಂ। ಸ ಆತ್ಮಾ। ತತ್ತ್ವಮಸಿ ಶ್ವೇತಕೇತೋ** = ಜಗತ್ತನ್ನು ನಿರ್ಮಿಸಿದ ಆ ಬ್ರಹ್ಮವೇ ಸತ್ಯ. ಶ್ವೇತಕೇತು, ನೀನು ಆ ಬ್ರಹ್ಮವೇ ಆಗಿದ್ದೀಯೆ.

**'ತತ್ತ್ವಮಸಿ'** ಎಂಬುದು ವಿಖ್ಯಾತವಾದ ಮಹಾವಾಕ್ಯ. ಇದನ್ನೇ ಒಂಬತ್ತು ಸಲ ಉದ್ದಾಲಕನು ಶ್ವೇತಕೇತುವಿಗೆ ಉಪದೇಶಿಸಿದ್ದಾನೆ.

**ಸಪ್ತಮಾಧ್ಯಾಯ**

ದೇವರ್ಷಿನಾರದರು ಸನತ್ಕುಮಾರರ ಬಳಿಗೆ ಹೋಗಿ 'ಭಗವನ್, ನನಗೆ ಉಪದೇಶ ಮಾಡಿರಿ' ಎಂದು ಕೇಳುತ್ತಾರೆ. ಸನತ್ಕುಮಾರರು 'ನಾರದ, ನೀನು ಇದುವರೆಗೆ ಅಧ್ಯಯನ ಮಾಡಿರುವುದೇನನ್ನು? ಅದನ್ನು ಮೊದಲು ಹೇಳು' ಎಂದು ಹೇಳುತ್ತಾರೆ. ಆಗ ನಾರದರು 'ನಾಲ್ಕು ವೇದಗಳು, ಇತಿಹಾಸ ಪುರಾಣಗಳು, ವ್ಯಾಕರಣಶಾಸ್ತ್ರ, ತರ್ಕ, ದೇವವಿದ್ಯೆ ಮುಂತಾದ ವಿದ್ಯೆಗಳು — ಇವೆಲ್ಲವನ್ನೂ ಅಧ್ಯಯನ ಮಾಡಿದ್ದೇನೆ. ಆದರೂ ನನಗೆ ಶಾಂತಿ ದೊರೆಯದೆ ಶೋಕಿಸುತ್ತಿದ್ದೇನೆ' ಎಂದು ಹೇಳುತ್ತಾರೆ. **ತರತಿ ಶೋಕಮಾತ್ಮವಿತ್** = ಆತ್ಮಜ್ಞಾನವಾಗದೆ ಶೋಕವು ಹೋಗುವುದಿಲ್ಲ. ಆದ್ದರಿಂದ ಸನತ್ಕುಮಾರರು ಆತ್ಮವಿದ್ಯೆಯನ್ನು ನಾರದರಿಗೆ ಬೋಧಿಸಿದ ವಿಷಯವಿಲ್ಲಿ ಬಂದಿದೆ.

**'ಯೋ ವೈ ಭೂಮಾ ತತ್ ಸುಖಂ। ನಾಲ್ಪೇ ಸುಖಮಸ್ತಿ'** ಎಂಬ ಮಾತು ಇಲ್ಲಿ ಬರುತ್ತದೆ. ಯಾವುದು ಮಹತ್ತಮವಾದದ್ದೋ, ಯಾವುದಕ್ಕಿಂತ ಅತಿಶಯವಾದದ್ದು ಇಲ್ಲವೋ ಅದು ಸುಖ. ಅಲ್ಪವಾದದ್ದರಲ್ಲಿ ಸುಖವಿಲ್ಲ. ಏಕೆಂದರೆ, ಅಲ್ಪವಾದದ್ದು ಇನ್ನೂ ಬೇಕೆಂಬ ಆಸೆಯನ್ನು ಹುಟ್ಟಿಸುತ್ತದೆ. ಮಹತ್ತಮವಾದದ್ದು ಭೂಮಬ್ರಹ್ಮ.

**'ಅಹಮೇವೇದಂ ಸರ್ವಂ, ಆತ್ಮೈವೇದಂ ಸರ್ವಂ'** ಎಂಬ ವಾಕ್ಯಗಳೂ ಇಲ್ಲಿವೆ.

**ಆಹಾರಶುದ್ಧೌ ಸತ್ತ್ವಶುದ್ಧಿಃ ಸತ್ತ್ವಶುದ್ಧೌ ಧ್ರುವಾ ಸ್ಮೃತಿಃ।**
**ಸ್ಮೃತಿಲಂಭೇ ಸರ್ವಗ್ರಂಥೀನಾಂ ವಿಪ್ರಮೋಕ್ಷಃ॥**

ಇಲ್ಲಿ ಆಹಾರಶಬ್ದಕ್ಕೆ ಶ್ರೀಶಂಕರಾಚಾರ್ಯರು **'ಆಹ್ರಿಯತೇ ಇತ್ಯಾಹಾರಃ**

**ಶಬ್ದಾದಿವಿಷಯವಿಜ್ಞಾನಮ್'** ಎಂದು ಅರ್ಥವನ್ನು ಹೇಳಿದ್ದಾರೆ. ಶಬ್ದಸ್ಪರ್ಶಾದಿ ವಿಷಯಗಳ ಜ್ಞಾನವೇ ಆಹಾರ ಅಥವಾ ಶಬ್ದಾದಿ ವಿಷಯಗಳೇ ಆಹಾರ. ರಾಗದ್ವೇಷಾದಿಗಳ ರಾಹಿತ್ಯವೇ ಶುದ್ಧಿ. ಈ ರೀತಿಯ ಆಹಾರ ಶುದ್ಧಿಯಾದರೆ ಅಂತಃಕರಣವು ಶುದ್ಧವಾಗುತ್ತದೆ. ಶುದ್ಧವಾದಾಗ ಆತ್ಮಸ್ಮೃತಿ ಸ್ಥಿರವಾಗಿ ನಿಲ್ಲುತ್ತದೆ. ಆಗ ಹೃದಯಗ್ರಂಥಿಗಳ ವಿನಾಶವಾಗುವುದು. **'ಭಿದ್ಯತೇ ಹೃದಯ ಗ್ರಂಥಿಃ'.**

## ಅಷ್ಟಮಾಧ್ಯಾಯ

ಆರಂಭದಲ್ಲಿ ದಹರವಿದ್ಯೆಯ ಉಪದೇಶವಿದೆ. ಈ ದೇಹವೇ ಬ್ರಹ್ಮ=ಪುರ. ಇದರಲ್ಲಿ ಹೃದಯವೆಂಬ ದಹರಗೃಹವಿದೆ. ದಹರ=ಚಿಕ್ಕದು. ಹೃದಯಕಮಲವೆಂದರೆ ಈ ದಹರಗೃಹ. ಇದರಲ್ಲಿ ಆತ್ಮನನ್ನು ಅನ್ವೇಷಿಸುವುದು ದಹರವಿದ್ಯೆ. ನೆಲದಲ್ಲಿ ಚಿನ್ನದ ನಿಧಿ ಅಡಗಿರುತ್ತದೆ. ಅದರ ಮೇಲೆ ಜನರು ತಿರುಗಾಡುತ್ತಲೇ ಇದ್ದರೂ ಕೆಳಗೆ ನೆಲದಲ್ಲಿ ಚಿನ್ನದ ನಿಧಿ ಇದೆಯೆಂಬುದು ಗೊತ್ತಿರುವುದಿಲ್ಲ. ಹಾಗೆಯೇ ಸಕಲ ಪ್ರಜೆಗಳೂ ಸುಷುಪ್ತಿಯಲ್ಲಿ ಪ್ರತಿದಿನವೂ ಈ ಆತ್ಮನ ಬಳಿಗೆ ಹೋದರೂ ಅದನ್ನು ತಿಳಿಯಲಾರದೆ ಹೋಗಿದ್ದಾರೆ! ಏಕೆಂದರೆ, **ಅನೃತೇನ ಹಿ ಪ್ರತ್ಯೂಢಾಃ** = ಅವಿದ್ಯಾದಿದೋಷಗಳಿಂದ ಜನರು ಹೊರಗೆ ನೋಡತಕ್ಕವರಾಗಿದ್ದಾರೆ! — ಎಂಬ ಮಾತು ಇಲ್ಲಿ ಬಂದಿದೆ.

ದೇವೇಂದ್ರನೂ ಅಸುರಾಧಿಪತಿಯಾದ ವಿರೋಚನನೂ ಬ್ರಹ್ಮಜ್ಞಾನಾಪೇಕ್ಷಿಗಳಾಗಿ ಪ್ರಜಾಪತಿಯ ಬಳಿಗೆ ಹೋಗಿ ಬ್ರಹ್ಮಚರ್ಯದಿಂದ ಗುರುಶುಶ್ರೂಷೆ ಮಾಡುತ್ತಾರೆ. ಬ್ರಹ್ಮತತ್ತ್ವವನ್ನರಿಯಲು ದೇವೇಂದ್ರನಿಗೆ ಸಾಧ್ಯವಾಗುತ್ತದೆ, ವಿರೋಚನನಿಗೆ ಸಾಧ್ಯವಾಗುವುದಿಲ್ಲ ಎಂಬ ಸ್ವಾರಸ್ಯಪೂರ್ಣ ಆಖ್ಯಾಯಿಕೆ ಇಲ್ಲಿ ಬಂದಿದೆ.

ಈ ಆತ್ಮವಿದ್ಯೆಯನ್ನು ಬ್ರಹ್ಮನು ಪ್ರಜಾಪತಿಗೂ ಪ್ರಜಾಪತಿಯು ಮನುವಿಗೂ ಮನುವು ಅರ್ಹರಾದ ಪ್ರಜೆಗಳಿಗೂ ಉಪದೇಶಿಸಿದನೆಂದು ವಿದ್ಯೆಯ ಸಾಂಪ್ರದಾಯಿಕತೆಯನ್ನು ಕಡೆಯಲ್ಲಿ ಹೇಳಲಾಗಿದೆ. ಆಚಾರ್ಯನಿಂದ ಉಪದೇಶವನ್ನು ಪಡೆದು, ತನ್ನ ಸಾಧನೆಗಳಿಂದ ಯಾವಾತನು ಗುರಿಯನ್ನು ತಲುಪುವನೋ ಅವನು ಮುಕ್ತನಾಗುತ್ತಾನೆ. ಆತನಿಗೆ ಪುನರ್ಜನ್ಮವಿಲ್ಲ ಎಂಬುದು ಛಾಂದೋಗ್ಯೋಪನಿಷತ್ತಿನ ಉಪಸಂಹಾರವಾಕ್ಯ.

## ೧೦. ಬೃಹದಾರಣ್ಯಕೋಪನಿಷತ್

ಇದು ಶುಕ್ಲಯಜುರ್ವೇದಕ್ಕೆ ಸೇರಿದ ವಾಜಸನೇಯಿಬ್ರಾಹ್ಮಣೋಪನಿಷತ್ತು.

ಅರಣ್ಯದಲ್ಲಿ ಅಧ್ಯಯನ ಮಾಡುತ್ತಿದ್ದುದರಿಂದ ಆರಣ್ಯಕವೆನಿಸಿದೆ. ಗಾತ್ರದಲ್ಲಿ ಬಹಳ ದೊಡ್ಡದಾದ್ದರಿಂದ ಬೃಹದಾರಣ್ಯಕವೆಂದು ಹೆಸರು. ಈ ಉಪನಿಷತ್ತಿನಲ್ಲಿ ಆರು ಅಧ್ಯಾಯಗಳಿವೆ. ಕಾಂಡದ ಒಳ ಭಾಗಗಳಿಗೆ ಬ್ರಾಹ್ಮಣಗಳೆಂದು ಹೆಸರು. ಆರು ಅಧ್ಯಾಯಗಳಿಂದ ಒಟ್ಟು ೫೬ ಬ್ರಾಹ್ಮಣಗಳಾಗುತ್ತವೆ.

**'ಓಂ ನಮೋ ಬ್ರಹ್ಮಾದಿಭ್ಯೋ ಬ್ರಹ್ಮವಿದ್ಯಾಸಂಪ್ರದಾಯಕರ್ತೃಭ್ಯೋ ವಂಶಋಷಿಭ್ಯೋ ಗುರುಭ್ಯೋ ನಮಃ'** ಎಂದು ಉಪನಿಷತ್ತಿನ ಆರಂಭ ವಾಗುತ್ತದೆ. ಇದೇ ಶಾಂತಿವಚನವೆಂದು ತಿಳಿಯಬೇಕು. ಐದು, ಆರನೆಯ ಅಧ್ಯಾಯಗಳು ಖಿಲಕಾಂಡಗಳೆಂದು ಶ್ರೀಶಂಕರಾಚಾರ್ಯರು ಬರೆದಿದ್ದಾರೆ. ಖಿಲಕಾಂಡ ವೆಂದರೆ ಪರಿಶಿಷ್ಟಕಾಂಡವೆಂದು ತಾತ್ಪರ್ಯ. ಐದನೆಯ ಅಧ್ಯಾಯದ ಆರಂಭದಲ್ಲಿ **'ಓಂ ಪೂರ್ಣಮದಃ ಪೂರ್ಣಮಿದಂ'** ಎಂಬ ಶಾಂತಿಮಂತ್ರವಿದೆ.

### ಪ್ರಥಮಾಧ್ಯಾಯ

ಅಶ್ವಮೇಧಯಾಗದಲ್ಲಿಡಬೇಕಾದ ದೃಷ್ಟಿವಿಶೇಷವನ್ನು ಹೇಳುವುದರೊಡನೆ ಉಪನಿಷತ್ತಿನ ಆರಂಭವಾಗುತ್ತದೆ: ಈ ಅಶ್ವದ ಶಿರಸ್ಸು ಉಷಾ (ಬ್ರಾಹ್ಮ ಮುಹೂರ್ತ), ಕಣ್ಣು ಸೂರ್ಯ, ವಾಯು ಪ್ರಾಣ, ಸಂವತ್ಸರವು ಶರೀರ — ಇತ್ಯಾದಿ. ಇದೆಲ್ಲವೂ ಕರ್ಮಾಂಗವಾದ ಅಶ್ವದಲ್ಲಿರಿಸಬೇಕಾದ ದೃಷ್ಟಿವಿಶೇಷಗಳು.

ದ್ವಿತೀಯಬ್ರಾಹ್ಮಣದಲ್ಲಿ **'ಮೃತ್ಯುನೈವೇದಂ ಪಿಹಿತಮಾಸೀತ್'** ಎಂಬ ವಾಕ್ಯ ವಿದೆ. ಈ ಬಗೆಯ ಶ್ರುತಿವಾಕ್ಯಗಳು ಕ್ಲಿಷ್ಟವಾಗಿದ್ದು ಗುರೂಪದೇಶವಿಲ್ಲದೆ ಅರ್ಥವಾಗುವುದಿಲ್ಲ. ಇಲ್ಲಿ ಮೃತ್ಯುವೆಂದರೆ ಹಿರಣ್ಯಗರ್ಭನೆಂದು ಶ್ರೀಶಂಕರರು ಯುಕ್ತಿಪ್ರಮಾಣಗಳಿಂದ ಉಪಪಾದಿಸಿದ್ದಾರೆ. ಹೀಗೆಯೇ 'ಪ್ರಜಾಪತಿಯು ತನ್ನನ್ನು ಆದಿತ್ಯ, ವಾಯು ಎಂಬುದಾಗಿ ತೃತೀಯನನ್ನಾಗಿ ವಿಭಾಗಿಸಿಕೊಂಡನು' ಇತ್ಯಾದಿ ವಾಕ್ಯಗಳಿವೆ. ಭಾಷ್ಯದ ನೆರವಿಲ್ಲದೆ ಇವು ಅರ್ಥವಾಗತಕ್ಕವುಗಳಲ್ಲ. ನಾಲ್ಕನೆಯ ಬ್ರಾಹ್ಮಣದಲ್ಲಿ **'ಆತ್ಮೈವೇದಮಗ್ರ ಆಸೀತ್'** ಎಂದು ಆರಂಭಿಸಿ, **'ಏಕಾಕೀ ನ ರಮತೇ'** ಎಂದು ಆಲೋಚಿಸಿ ಆತ್ಮನು ಈ ಜಗತ್ತನ್ನು ನಾಮರೂಪಗಳಿಂದ ವ್ಯಾಕೃತವಾಗಿ ಸೃಜಿಸಿದನು ಎಂಬ ವಿಚಾರ ಬಂದಿದೆ. **'ಆತ್ಮೈವೇದಮಗ್ರ ಆಸೀತ್'** ಎಂಬ ವಾಕ್ಯವು ಈ ಅಧ್ಯಾಯದಲ್ಲಿ ಅನೇಕ ಸಲ ಬಂದಿದೆ.

### ದ್ವಿತೀಯಾಧ್ಯಾಯ

ಗಾರ್ಗ್ಯಗೋತ್ರದ ದೃಪ್ತಬಾಲಾಕಿಗೂ ಕಾಶೀರಾಜನಾದ ಅಜಾತಶತ್ರುವಿಗೂ

ನಡೆದ ಸಂವಾದ ಇಲ್ಲಿ ಬಂದಿದೆ. ಅಹಂಕಾರಿಯಾದ ಬಾಲಾಕಿಯೇ ದೃಪ್ತಬಾಲಾಕಿ. ಅವನು ಅಜಾತಶತ್ರುವಿಗೆ ಬ್ರಹ್ಮಸ್ವರೂಪವನ್ನು ತಿಳಿಸುತ್ತೇನೆಂದು ಗರ್ವದಿಂದ ನುಡಿಯುತ್ತಾನೆ. ಸಂವಾದದಲ್ಲಿ ಅವನೇ ಪರಾಜಿತನಾಗಿ ಅಜಾತಶತ್ರುವಿನಿಂದಲೇ ಉಪದೇಶವನ್ನು ಪಡೆಯಬೇಕಾಗಿ ಬರುತ್ತದೆಯೆಂಬ ಆಖ್ಯಾಯಿಕೆ ಇಲ್ಲಿದೆ.

ಮೂರನೆಯ ಬ್ರಾಹ್ಮಣದಲ್ಲಿ ಯಾಜ್ಞವಲ್ಕ್ಯ-ಮೈತ್ರೇಯಿಯರ ಆಕರ್ಷಕವಾದ ಸಂಭಾಷಣೆ ಬಂದಿದೆ. **'ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತಿ, ಆತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ'** ಎಂದು ಆರಂಭಿಸಿ ಸರ್ವವೂ ಆತ್ಮನಿಗಾಗಿ (ತನಗಾಗಿ) ಪ್ರಿಯವಾಗಿರುತ್ತದೆಯೇ ಹೊರತು ಆಯಾ ವಸ್ತುಗಳಿಗಾಗಿ ಅಲ್ಲ – ಎಂದು ಯಾಜ್ಞವಲ್ಕ್ಯರು ತಿಳಿಸುತ್ತಾರೆ. ಆತ್ಮನೇ ಅತ್ಯಂತ ಪ್ರಿಯನಾದವನು, ಆದ್ದರಿಂದ **'ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ'** ಎಂದು ಯಾಜ್ಞವಲ್ಕ್ಯರು ಬೋಧಿಸುತ್ತಾರೆ. ಉದ್ಬೋಧಕವಾದ ಪ್ರಕರಣ ಇದು.

ಐದನೆಯ ಬ್ರಾಹ್ಮಣದಲ್ಲಿ **'ಯೋಽಯಮಾತ್ಮಾ ಇದಮಮೃತಮಿದಂ ಬ್ರಹ್ಮ ಇದಂ ಸರ್ವಂ'** ಎಂಬ ವಾಕ್ಯವು ಕ್ರಮವಾಗಿ ಹದಿನಾಲ್ಕು ಮಂತ್ರಗಳಲ್ಲಿ ಹದಿನಾಲ್ಕು ಸಲ ಬಂದಿದೆ. **'ಅಯಮಾತ್ಮಾ ಬ್ರಹ್ಮ'** ಎಂಬ ಮಹಾವಾಕ್ಯವು ಇಲ್ಲಿಯೂ ಇದೆ.

### ತೃತೀಯಾಧ್ಯಾಯ

ಜನಕರಾಜನ ಸಭೆಯಲ್ಲಿ ಯಾಜ್ಞವಲ್ಕ್ಯರಿಗೂ ಇತರ ಬ್ರಹ್ಮವಾದಿಗಳಿಗೂ ನಡೆದ ವಾಗ್ವಿವಾದದ ಪ್ರಸ್ತಾವ ಇದೆ. ಯಾಜ್ಞವಲ್ಕ್ಯರು ಎಲ್ಲರ ಪ್ರಶ್ನೆಗಳಿಗೂ ಉತ್ತರವನ್ನಿತ್ತು ಅವರನ್ನು ಪರಾಭವಗೊಳಿಸುತ್ತಾರೆ. ಗಾರ್ಗಿವಾಚಕ್ನವೀ ಎಂಬ ಬ್ರಹ್ಮವಾದಿನಿಯೂ ಯಾಜ್ಞವಲ್ಕ್ಯರಿಗೆ ಪ್ರಶ್ನೆ ಹಾಕುತ್ತಾಳೆ. ಕಡೆಗೆ ಜನಕರಾಜನಿತ್ತ ಸಂಭಾವನೆ ಯಾಜ್ಞವಲ್ಕ್ಯರಿಗೆ ಸಲ್ಲುತ್ತದೆ.

ಮೂರನೆಯ ಬ್ರಾಹ್ಮಣದಲ್ಲಿ **ಯತ್ ಸಾಕ್ಷಾದಪರೋಕ್ಷಾದ್ ಬ್ರಹ್ಮ ಯ ಆತ್ಮಾ ಸರ್ವಾಂತರಃ** – ಎಂಬ ನುಡಿ ಬಂದಿದೆ. ಜನಕರಾಜನಿಗೆ ಯಾಜ್ಞವಲ್ಕ್ಯರು ಬೋಧಿಸಿದ ಆತ್ಮವಿಚಾರವಿದೆ.

### ಚತುರ್ಥಾಧ್ಯಾಯ

ಚತುರ್ಥಾಧ್ಯಾಯದಲ್ಲಿ ಅವಸ್ಥಾತ್ರಯ ಜಿಜ್ಞಾಸೆಯಿದ್ದು ಸುಷುಪ್ತಿಯ ವರ್ಣನೆ ಮನೋಹರವಾಗಿದೆ. ಈ ಅವಸ್ಥೆಯಲ್ಲಿ ಆತ್ಮನಿಗೆ ಸಮಸ್ತ ಬಾಂಧವ್ಯಗಳೂ

ತೊಡೆದುಹೋಗುತ್ತವೆ. **'ಪಿತಾ ಅಪಿತಾ ಭವತಿ, ಮಾತಾ ಅಮಾತಾ ಭವತಿ' 'ದೇವಾ ಅದೇವಾಃ, ವೇದಾ ಅವೇದಾಃ'** ಆತ್ಮನು ಅಸಂಗನೆಂದೂ ನಿರಂಜನನೆಂದೂ ತಿಳಿಸುವುದಕ್ಕಾಗಿ ಈ ವಿವರಣೆ ಬಂದಿದೆ. **'ನ ಹಿ ವಿಜ್ಞಾತುರ್ವಿಜ್ಞಾತೇರ್ವಿಪರಿಲೋಪೋ ವಿದ್ಯತೇ ಅವಿನಾಶಿತ್ವಾತ್' 'ಏತಸ್ಯೈವ ಆನಂದಸ್ಯ ಅನ್ಯಾನಿ ಭೂತಾನಿ ಮಾತ್ರಾಮುಪಜೀವಂತಿ' 'ಸಲಿಲ ಏಕೋ ದ್ರಷ್ಟಾ ಅದ್ವೈತೋ ಭವತಿ'** ಎಂಬ ವಿಖ್ಯಾತ ಶ್ರುತಿವಾಕ್ಯಗಳು ಇಲ್ಲಿವೆ. ವಂಶ ಋಷಿಗಳ ಪರಂಪರೆ ನಾಲ್ಕನೆಯ ಅಧ್ಯಾಯದ ಕಡೆಯಲ್ಲಿ ಬರುತ್ತದೆ.

**ಪಂಚಮಾಧ್ಯಾಯ**

ದೇವತೆಗಳೂ ಮನುಷ್ಯರೂ ಅಸುರರೂ ತಂದೆಯಾದ ಪ್ರಜಾಪತಿಯ ಬಳಿಗೆ ಹೋಗಿ ತಮಗೆ ಹಿತೋಪದೇಶ ಮಾಡಬೇಕೆಂದು ಕೇಳಿಕೊಳ್ಳುತ್ತಾರೆ. ಪ್ರಜಾಪತಿಯು ದೇವತೆಗಳಿಗೆ 'ದ' ಎಂದು ಉಪದೇಶಿಸಿದನು; ದೇವತೆಗಳು 'ದಾಮ್ಯತ = ಇಂದ್ರಿಯ ನಿಗ್ರಹಮಾಡಿರಿ' ಎಂದು ಅರ್ಥಮಾಡಿಕೊಂಡರು. ಮನುಷ್ಯರಿಗೂ 'ದ' ಎಂದು ಉಪದೇಶಿಸಿದನು; 'ದಾನಮಾಡಿರಿ' ಎಂದು ಅವರು ಅರ್ಥಮಾಡಿಕೊಂಡರು. ಅಸುರರಿಗೂ 'ದ' ಎಂದು ಹೇಳಿದಾಗ ಅವರು 'ದಯಧ್ವಂ = ಪ್ರಾಣಿಗಳಲ್ಲಿ ದಯೆಯನ್ನಿಡಿರಿ' ಎಂದು ಅರ್ಥವನ್ನು ಗ್ರಹಿಸಿದರು. ಎಲ್ಲರೂ ಅರ್ಥಮಾಡಿ ಕೊಂಡದ್ದೂ ಸರಿಯಾಗಿತ್ತು. ಅವರ ಕೆಟ್ಟ ಸ್ವಭಾವಗಳನ್ನು ತಿದ್ದುವುದಕ್ಕಾಗಿ ಪ್ರಜಾಪತಿಯು ಹಾಗೆ ಉಪದೇಶಿಸಿದ್ದನು.

ಹದಿನಾಲ್ಕನೆಯ ಬ್ರಾಹ್ಮಣದಲ್ಲಿ ಗಾಯತ್ರೀಮಂತ್ರದ ಉಪಾಸನೆ, ಮಹಿಮೆ ಮುಂತಾದ ವಿವರಗಳಿವೆ. ಪ್ರಸಿದ್ಧವಾದ **'ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ। ತತ್ ತ್ವಂ ಪೂಷನ್ನಪಾವೃಣು ಸತ್ಯಧರ್ಮಾಯ ದೃಷ್ಟಯೇ'** ಎಂಬ ಮಂತ್ರವು ಈ ಅಧ್ಯಾಯದ ಕಡೆಯ ಬ್ರಾಹ್ಮಣದಲ್ಲಿ ಬಂದಿದೆ. 'ಹೇ ಆದಿತ್ಯ, ಜ್ಯೋತಿರ್ಮಯವಾದ ನಿನ್ನ ಮಂಡಲದಿಂದ ಸತ್ಯಸ್ವರೂಪವಾದ ಬ್ರಹ್ಮವು ಮುಚ್ಚಿದಂತೆ ಮರೆಯಾಗಿದೆ. ಸತ್ಯವೇ ಧರ್ಮವಾಗಿರುವ ನನ್ನ ದರ್ಶನಕ್ಕೆ ಅವಕಾಶವಾಗುವಂತೆ ಆ ಮುಚ್ಚಲನ್ನು ನೀನು ತೆರೆ' ಎಂದು ಇದರ ತಾತ್ಪರ್ಯ. ಈ ಅಧ್ಯಾಯವು ಚಿಕ್ಕದು.

**ಷಷ್ಠಾಧ್ಯಾಯ**

ಇಂದ್ರಿಯಗಳಲ್ಲಿ ಯಾವುದು ಶ್ರೇಷ್ಠವೆಂಬ ವಿವಾದವುಂಟಾಗಿ ಪ್ರಾಣವು

ಶ್ರೇಷ್ಠವೆಂದು ನಿರ್ಣಯವಾಗುತ್ತದೆ. ಈ ಕಥೆ ಛಾಂದೋಗ್ಯದಲ್ಲಿಯೂ ಬಂದಿದೆ. ಅರ್ಚಿರಾದಿಮಾರ್ಗಗಳ ವಿಚಾರವೂ ಪಂಚಾಗ್ನಿವಿದ್ಯೆಯ ವಿಚಾರವೂ ಇಲ್ಲಿ ಬಂದಿವೆ. ಪಂಚಾಗ್ನಿವಿದ್ಯೆಯ ವಿಚಾರವು ಛಾಂದೋಗ್ಯದಲ್ಲಿಯೂ ಇದೆ.

ಈ ಉಪನಿಷತ್ತಿನಲ್ಲಿರುವ ಕೆಲವು ವಿಶೇಷಗಳನ್ನು ಈಗ ಗುರುತಿಸಬಹುದು.

೧. ಯಾಜ್ಞವಲ್ಕ್ಯರು ಬ್ರಹ್ಮವಿದರಲ್ಲಿ ಅಗ್ರಗಣ್ಯರು.

೨. ಗಾರ್ಗಿ, ಮೈತ್ರೇಯಿ—ಎಂಬ ಇಬ್ಬರು ಮಹಿಳೆಯರು ಬ್ರಹ್ಮವಾದಿನಿಯರಾಗಿದ್ದರು.

೩. ವಾಕ್ ಎಂಬುದು ಬ್ರಹ್ಮ. ಈ ವಾಕ್ಕಿಗೆ ಅಧಿಪತಿಯಾದವನು ಪ್ರಾಣ. ಆದ್ದರಿಂದ ಪ್ರಾಣನೇ ಬ್ರಹ್ಮಣಸ್ಪತಿ.

೪. ಅಶ್ವವು ಉಷಾ, ಸೂರ್ಯನು ಕಣ್ಣು — ಈ ರೀತಿಯಾದ ಆರೋಪಿತ ವ್ಯವಹಾರಗಳ ಆಧಿಕ್ಯ.

೫. ಕರ್ಮಕಾಂಡ-ಜ್ಞಾನಕಾಂಡಗಳ ಸಮನ್ವಯ.

೬. ಸಂನ್ಯಾಸದ ಕಡೆಗೆ ಒಲವು.

೭. ವಿಸ್ತೃತವಾದ ಗುರುಶಿಷ್ಯ ಪರಂಪರೆ.

೮. ಅಧ್ಯಾಯದ ಖಂಡಗಳಿಗೆ ಬ್ರಾಹ್ಮಣ ಎಂಬ ನಾಮಕರಣ.

## ೧೧. ಶ್ವೇತಾಶ್ವತರೋಪನಿಷತ್

ಇದು ದಶೋಪನಿಷತ್ತುಗಳಲ್ಲಿ ಸೇರಿಲ್ಲವಾದರೂ ವೇದಾಂತದರ್ಶನದಲ್ಲಿ ಈ ಉಪನಿಷತ್ತಿಗೆ ವಿಶಿಷ್ಟವಾದ ಪ್ರಾಧಾನ್ಯವಿದೆ. ಇದಕ್ಕೆ ಶ್ರೀಶಂಕರಾಚಾರ್ಯರು ಭಾಷ್ಯವನ್ನು ಬರೆದಿದ್ದಾರೆ. ಈ ಉಪನಿಷತ್ತು ಕೃಷ್ಣಯಜುರ್ವೇದಕ್ಕೆ ಸೇರುತ್ತದೆ. ಸಹ ನಾವವತು ಎಂಬುದು ಶಾಂತಿಮಂತ್ರ. ಇದರಲ್ಲಿ ಆರು ಅಧ್ಯಾಯಗಳೂ ಒಟ್ಟು ೧೧೩ ಮಂತ್ರಗಳೂ ಇವೆ. ಎಲ್ಲವೂ ಶ್ಲೋಕಾತ್ಮಕವಾದವು.

ಶ್ವೇತಾಶ್ವತರ ಋಷಿಯು ಅತ್ಯಾಶ್ರಮಿಗಳಿಗೆ — ಎಂದರೆ ಪರಮಹಂಸ ಪರಿವ್ರಾಜಕರಿಗೆ ಈ ಬಗೆಯಲ್ಲಿ ಬ್ರಹ್ಮೋಪದೇಶವನ್ನು ಮಾಡಿದನೆಂದು ಆರನೆಯ ಅಧ್ಯಾಯದ ಇಪ್ಪತ್ತೊಂದನೆಯ ಮಂತ್ರದಲ್ಲಿ ಹೇಳಿದೆ. ಸಾಂಖ್ಯ, ಯೋಗ, ದ್ವೈತ, ಅದ್ವೈತ ದರ್ಶನಗಳಿಗೆ ಅನುಕೂಲವಾಗಿರುವ ವಿಷಯಗಳ ವರ್ಣನೆ ಪ್ರಸಂಗಾನು

ಸಾರವಾಗಿ ಬಂದಿದೆ. ಪರಮಾತ್ಮನು ಸಗುಣ, ನಿರ್ಗುಣ — ಎಂಬ ಉಭಯ ಪಕ್ಷಗಳಿಗೆ ಬೇಕಾದ ವಾಕ್ಯಗಳೂ ಇವೆ.

ಈ ಜಗತ್ತಿಗೆ ಕಾರಣವಾದದ್ದು ಯಾವುದು? ನಾವು ಯಾವ ನಿಮಿತ್ತದಿಂದ ಹುಟ್ಟಿದೆವು? — ಇತ್ಯಾದಿ ವಿಚಾರಗಳನ್ನು ಬ್ರಹ್ಮವಾದಿಗಳು ತಿಳಿಯಲುದ್ದೇಶಿಸಿ ಧ್ಯಾನಯೋಗದಿಂದ ಇದೆಲ್ಲವನ್ನೂ ತಿಳಿದುಕೊಂಡರೆಂದು ಈ ಉಪನಿಷತ್ತಿನಲ್ಲಿದೆ. ಕಡೆಗೆ ಆ ತಪಸ್ವಿಗಳು ಇದೆಲ್ಲ ಪರಬ್ರಹ್ಮದ ಮಾಯಾಶಕ್ತಿಯಿಂದ ಆಗಿದೆಯೆಂಬುದನ್ನು ತಪೋಬಲದಿಂದ ಅರಿತುಕೊಂಡರಂತೆ. ಈ ಮಾಯಾಶಕ್ತಿಗೆ ಪ್ರೇರಕನಾದವನು ಪರಮಾತ್ಮನೆಂಬುದೂ ಅವರಿಗೆ ಗೋಚರವಾಯಿತು — ಎಂಬ ಪೀಠಿಕೆಯೊಡನೆ ಮುಂದುವರಿಯುತ್ತದೆ ಈ ಉಪನಿಷತ್ತು.

ಋಷಿಗಳು ಈ ಜಗತ್ತಿನ ಸೃಷ್ಟಿಗೆ ಕಾಲ, ಸ್ವಭಾವ, ನಿಯತಿ, ಯದೃಚ್ಛಾ, ಪುರುಷ — ಇವುಗಳಲ್ಲೊಂದು ಕಾರಣವಾಗಿರಬಹುದೆ? — ಎಂದು ವಿಚಾರ ಮಾಡಿದರು. ಸ್ವಭಾವ = ವಸ್ತುಗಳಲ್ಲಿರುವ ಶಕ್ತಿವಿಶೇಷ. ನಿಯತಿ = ಜೀವಗಳ ಪುಣ್ಯಾಪಾಪರೂಪ ವಾದ ಕರ್ಮ. ಯದೃಚ್ಛಾ = ಆಕಸ್ಮಿಕವಾದ ಘಟನೆ. ಪುರುಷ = ಜೀವಾತ್ಮ. ಕಡೆಗೆ ತಮ್ಮ ತಪೋಬಲದಿಂದ ಪರಮಾತ್ಮನ ತ್ರಿಗುಣಾತ್ಮಕವಾದ ಮಾಯಾಶಕ್ತಿಯೇ ಜಗನ್ನಿರ್ಮಾಣಕ್ಕೆ ಕಾರಣವೆಂಬುದನ್ನು ಕಂಡುಕೊಂಡರು. ಪರಮಾತ್ಮನ ಸಾಕ್ಷಾತ್ಕಾರ ದಿಂದ ಜೀವನು ಮುಕ್ತನಾಗುತ್ತಾನೆ ಎಂಬುದು ಪ್ರಥಮಾಧ್ಯಾಯದಲ್ಲಿದೆ.

ದ್ವಿತೀಯಾಧ್ಯಾಯದಲ್ಲಿ ಸಾಕ್ಷಾತ್ಕಾರಕ್ಕೆ ಸಾಧನವೇನೆಂಬುದರ ವಿವರಣೆ ಇದೆ. ಮೊದಲು ಆತ್ಮತತ್ತ್ವದ ಸಗುಣಸ್ವರೂಪವನ್ನು ಹೇಳಿ ಅದೇ ತತ್ತ್ವವು ಸರ್ವರ ಹೃದಯದಲ್ಲಿ ಅಂತರ್ಯಾಮಿಯಾಗಿದೆಯೆಂಬುದನ್ನು ವಿವರಿಸಿ ಕಡೆಗೆ ಅದರ ನಿರ್ಗುಣವಾದ ಶುದ್ಧಸ್ವರೂಪವನ್ನು ಬೋಧಿಸಲಾಗಿದೆ. ಹೀಗೆ ಜ್ಞೇಯವಾದ ಬ್ರಹ್ಮದ ಸ್ವರೂಪವರ್ಣನೆ ತೃತೀಯಾಧ್ಯಾಯದಲ್ಲಿಯೂ ಮುಂದುವರಿಯುತ್ತದೆ.

ನಾಲ್ಕನೆಯ ಅಧ್ಯಾಯದಲ್ಲಿ ಸಾಂಖ್ಯರು ಉಪಯೋಗಿಸಿಕೊಳ್ಳುವ —

**ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ**
**ಬಹ್ವೀಃ ಪ್ರಜಾಃ ಸೃಜಮಾನಾಂ ಸರೂಪಾಃ।**
**ಅಜೋ ಹ್ಯೇಕೋ ಜುಷಮಾಣೋಽನುಶೇತೇ**
**ಜಹಾತ್ಯೇನಾಂ ಭುಕ್ತಭೋಗಾಮಜೋಽನ್ಯಃ॥** (೪-೫)

ಎಂಬ ಮಂತ್ರ ಬಂದಿದೆ. ಸಾಂಖ್ಯರ ಪ್ರಕಾರ ಲೋಹಿತಶುಕ್ಲಕೃಷ್ಣಾ ಎಂದರೆ ರಜೋ

ಗುಣ ಸತ್ತ್ವಗುಣ ತಮೋಗುಣಗಳುಳ್ಳ, ಅಜಾ=ಅನಾದಿಯಾದ ಪ್ರಧಾನ ಎಂದರ್ಥ. ತ್ರಿಗುಣಾತ್ಮಕವಾದ ಪ್ರಕೃತಿ ಎಂದು ಅಭಿಪ್ರಾಯ. ಒಂದು ಅಜವು (ಜೀವಾತ್ಮನು) ಈ ಮಾಯೆಯನ್ನು ಅವಲಂಬಿಸಿಕೊಂಡಿದೆ. ಇನ್ನೊಂದು ಅಜವು (ಈಶ್ವರನು) ಮಾಯಾ ಸಂಬಂಧವಿಲ್ಲದೆ ಮುಕ್ತವಾಗಿದೆ. ಶ್ರುತಿಗಳಲ್ಲಿ ಇದೊಂದೇ ಮಂತ್ರವು ಸಾಂಖ್ಯರಿಗೆ ಆಧಾರವಾದದ್ದು. ಈ ಸಾಂಖ್ಯಮತವನ್ನು ಶ್ರೀಶಂಕರಾಚಾರ್ಯರು ಶಾರೀರಕಸೂತ್ರ ಭಾಷ್ಯದಲ್ಲಿ ಖಂಡಿಸಿದ್ದಾರೆ. ಲೋಹಿತಶುಕ್ಲಕೃಷ್ಣಾ ಎಂದರೆ ತ್ರಿಗುಣಾತ್ಮಕವಾದ ಪ್ರಕೃತಿಯೆಂದು ಅರ್ಥವಲ್ಲ, ಛಾಂದೋಗ್ಯದ ಆರನೆಯ ಅಧ್ಯಾಯದಲ್ಲಿ ಬರುವ ಪೃಥಿವೀ, ಅಪ್, ತೇಜಸ್ಸುಗಳ ಸೂಕ್ಷ್ಮಭೂತಗಳೆಂದರ್ಥ. ಪೃಥಿವೀ = ಕೃಷ್ಣವರ್ಣ, ಅಪ್= ಶುಕ್ಲವರ್ಣ, ತೇಜಸ್ = ರಕ್ತವರ್ಣ. ಅವಿದ್ಯೆಯಿಂದ ಬದ್ಧನಾದವನು ಮಾಯೆಯ ವಶದಲ್ಲಿರುತ್ತಾನೆ; ಗುರೂಪದೇಶವನ್ನು ಪಡೆದ ಇನ್ನೊಬ್ಬನು ಮಾಯೆ ಯಿಂದ ಬಿಡುಗಡೆ ಹೊಂದುತ್ತಾನೆ — ಇತ್ಯಾದಿ ಪ್ರಕಾರಗಳಿಂದ ಸಾಂಖ್ಯಮತವನ್ನು ನಿರಾಕರಿಸಿದ್ದಾರೆ. **ದ್ವಾ ಸುಪರ್ಣಾ ಸಯುಜಾ ಸಖಾಯಾ** ಎಂಬ ಮಂತ್ರವನ್ನು ದ್ವೈತವಾದಿಗಳು ತಮಗೆ ಅನುಕೂಲವಾಗಿದೆಯೆಂದೂ ದ್ವಾ-ಸುಪರ್ಣಾ ಎಂದರೆ ಜೀವಾತ್ಮ-ಪರಮಾತ್ಮರೆಂದೂ ಹೇಳುತ್ತಾರೆ. ಶ್ರೀಶಂಕರಾಚಾರ್ಯರು ಔಪಾಧಿಕಭೇದ ದಿಂದ ವಿಜ್ಞಾನಾತ್ಮ-ಪರಮಾತ್ಮರೆಂಬ ದ್ವೈತವೇ ಹೊರತು ಪಾರಮಾರ್ಥಿಕವಾಗಿ ಭೇದವಿಲ್ಲವೆಂದು ಹೇಳಿದ್ದಾರೆ. ವಸ್ತುತಃ ಭಗವಂತನನ್ನು ಯಾವ ಭಾವದಿಂದ ಭಜಿಸಿದರೂ ಅದು ಫಲದಾಯಕವೇ ಆಗುತ್ತದೆ. ಈಶ್ವರನ ಅಸ್ತಿತ್ವವನ್ನೂ ಆತನ ಸರ್ವೇಶ್ವರತ್ವವನ್ನೂ ಉಪನಿಷತ್ತುಗಳು ಘೋಷಿಸುತ್ತವೆಯೆಂಬ ನಂಬಿಕೆ ಮಾನವನಿಗೆ ತಾರಕ.

ಈ ಉಪನಿಷತ್ತಿನಲ್ಲಿರುವ ಕೆಲವು ಮನನೀಯ ವಾಕ್ಯಗಳನ್ನು ವಾಚಕರ ಸೌಕರ್ಯ ಕ್ಕಾಗಿ ಕೆಳಗೆ ಉದಾಹರಿಸಲಾಗಿದೆ.

**೧. ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಂ।**
**ತಸ್ಯಾವಯವಭೂತೈಸ್ತು ವ್ಯಾಪ್ತಂ ಸರ್ವಮಿದಂ ಜಗತ್॥** (೪-೧೦)

ಜಗತ್ತಿಗೆ ಕಾರಣವಾದ ಪ್ರಕೃತಿಯು ಮಾಯೆಯೆಂದೂ ಪರಮೇಶ್ವರನು ಮಾಯೆಗೆ ಅಧಿಷ್ಠಾನವಾಗಿದ್ದಾನೆಂದೂ ತಿಳಿದುಕೊ. ಆ ಪರಮೇಶ್ವರನ ಮಾಯಿಕವಾದ ಅವಯವಗಳಿಂದ ಸರ್ವಜಗತ್ತೂ ವ್ಯಾಪ್ತವಾಗಿದೆ.

**೨. ನೈವ ಸ್ತ್ರೀ ನ ಪುಮಾನೇಷ ನ ಚೈವಾಯಂ ನಪುಂಸಕಃ।**
**ಯದ್ಯತ್ ಶರೀರಮಾದತ್ತೇ ತೇನ ತೇನ ಸ ಯುಜ್ಯತೇ॥** (೫-೧೦)

ಪರಮಾತ್ಮನು ಸ್ತ್ರೀಯೂ ಅಲ್ಲ, ಪುರುಷನೂ ಅಲ್ಲ, ನಪುಂಸಕನೂ ಅಲ್ಲ. ಯಾವಯಾವ ಶರೀರವನ್ನು ಜೀವಾತ್ಮನಾಗಿ ಧರಿಸುತ್ತಾನೋ ಆಯಾ ಅಭಿಧಾನದಿಂದ — ಗಂಡಸು, ಹೆಂಗಸು, ನಪುಂಸಕ ಇತ್ಯಾದಿ ಶಬ್ದಗಳಿಂದ — ಯುಕ್ತನಾಗುತ್ತಾನೆ.

**೩. ಯಸ್ಯ ದೇವೇ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ।**
**ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ॥** (೬-೨೩)

ಯಾವಾತನಿಗೆ ಪರಮೇಶ್ವರನಲ್ಲಿ ನಿರ್ವ್ಯಾಜವಾದ ಭಕ್ತಿ ಇದೆಯೋ ಅಂತೆಯೇ ತನ್ನ ಗುರುವಿನಲ್ಲಿಯೂ ಭಕ್ತಿಯಿರುತ್ತದೆಯೋ, ಆ ಉತ್ತಮಾಧಿಕಾರಿಯಾದ ಮಹಾತ್ಮನಿಗೆ ಈ ಉಪನಿಷತ್ತಿನಲ್ಲಿ ಹೇಳಿದ ವಿಷಯಗಳೆಲ್ಲವೂ ಸ್ವಾನುಭವಕ್ಕೆ ಬರುತ್ತವೆ.

ಈ ಬಗೆಯ ಹಲವಾರು ವಾಕ್ಯಗಳನ್ನು ಉದಾಹರಿಸಬಹುದು. ಶ್ವೇತಾಶ್ವತರೋಪನಿಷತ್ತಿಗೆ ಆದಿಶಂಕರಾಚಾರ್ಯರು ಭಾಷ್ಯವನ್ನು ಬರೆದಿಲ್ಲವೆಂದೂ ಉಪಲಬ್ಧವಾಗಿರುವ ಭಾಷ್ಯವು ಶಂಕರಾಚಾರ್ಯರೆಂಬ ಹೆಸರಿನ ಇನ್ನೊಬ್ಬ ಆಚಾರ್ಯರು ಬರೆದಿರಬೇಕೆಂದೂ ಕೆಲವರು ಹೇಳಿದ್ದಾರೆ. ಆದಿಶಂಕರರ ಪ್ರಸನ್ನ ಗಂಭೀರವಾದ ಶೈಲಿ, ಪಾಂಡಿತ್ಯ, ಪ್ರೌಢಿ — ಇದರಲ್ಲಿ ಕಾಣಿಸುವುದಿಲ್ಲವೆಂಬುದು ಅವರ ಹೇಳಿಕೆಗೆ ಕಾರಣವಾಗಿದೆ. ಹೇಗಿದ್ದರೂ ಈ ಉಪನಿಷತ್ತನ್ನು ಆಚಾರ್ಯರು ಶಾರೀರಕಾದಿ ಭಾಷ್ಯ ಗಳಲ್ಲಿ ವಿಪುಲವಾಗಿ ಉದಾಹರಿಸಿರುವುದರಿಂದ, ಈ ಉಪನಿಷತ್ತಿನ ಪ್ರಾಮಾಣ್ಯ ಕ್ಕಾಗಲಿ ಪ್ರಾಧಾನ್ಯಕ್ಕಾಗಲಿ ಯಾವ ನ್ಯೂನತೆಯೂ ಇಲ್ಲ.

ಹೀಗೆಯೇ ಶ್ರೀರಾಮಾನುಜಾಚಾರ್ಯರೂ ಶ್ರೀಮಧ್ವಾಚಾರ್ಯರೂ ತಮ್ಮ ತಮ್ಮ ಸಿದ್ಧಾಂತಗಳಿಗೆ ಅನುಗುಣವಾಗಿ ಉಪನಿಷತ್ತುಗಳನ್ನು ವ್ಯಾಖ್ಯಾನಿಸುತ್ತಾರೆ.

**– ವಿದ್ವಾನ್ ಎನ್. ರಂಗನಾಥಶರ್ಮಾ**

ವೇದಸಾಹಿತ್ಯ-ಸಂಸ್ಕೃತಿಗಳ ಬಗೆಗೆ ಎಷ್ಟೆಷ್ಟೋ ಜನರಿಗೆ ಇಲ್ಲದ ಸಲ್ಲದ ಅನುಮಾನಗಳಿವೆ, ಅಂಧಶ್ರದ್ಧೆಗಳೂ ಇವೆ. ನಾಸ್ತಿಕರೂ ಆಸ್ತಿಕರೂ ಅದೆಷ್ಟೋ ಬಾರಿ ಸಮಾನವಾಗಿ ಅಜ್ಞಾನದಲ್ಲಿ ಮುಳುಗಿರುತ್ತಾರೆ. ಇಂಥವರೆಲ್ಲ ಮೊದಲು ಡಿ.ವಿ.ಜಿ.ಯವರ ಈ ಕಿರುಹೊತ್ತಿಗೆಯನ್ನು ಓದಬೇಕು, ಆಸ್ಥೆಯಿಂದ ಓದಬೇಕು. ಇಲ್ಲಿ ವೇದಗಳ 'ವಸ್ತುತಂತ್ರ' ಸ್ವರೂಪದ ಸರಳ ವಾದರೂ ಸಾರವತ್ತಾದ ವಿವರಣೆಯಿದೆ.




Published by: Gokhale Institute of Public Affairs, Bangalore-560019

Price: Rs. 50/